

ಅಧ್ಯಯನಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩೨೭೬

೨೦೧೪–೧೫ನೆಯ ಸಾಲಿನ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# ಡಾ. ಎಂ.ಎಸ್.ವೇದಾರವರ ಕಾದಂಬರಿಗಳಲ್ಲಿ ಸ್ತ್ರೀಪಾತ್ರ ಚಿತ್ರಣ


ನಿಬಂಧಕಾರರು

ಮಧು.ಎಂ

ನೋಂದಣಿ ಸಂಖ್ಯೆ – KVTM/K 140901030091

ಕನ್ನಡ ಎಂ.ಫಿಲ್ ವಿದ್ಯಾರ್ಥಿ

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

ಡಾ. ಎನ್.ಮಹೇಶ್ವರಿ

ಸಹ ಪ್ರಾಧ್ಯಾಪಕರು

ಕನ್ನಡ ಸ್ನಾತಕೋತ್ತರ ವಿಭಾಗ

ಜೆ.ಎಸ್.ಎಸ್.ಕಾಲೇಜು., ಚಾಮರಾಜನಗರ



ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

೨೦೧೪–೧೫





ಅಧ್ಯಯನಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩೨೭೬

೨೦೧೪–೧೫ನೆಯ ಸಾಲಿನ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# ಡಾ. ಎಂ.ಎಸ್.ವೇದಾರವರ ಕಾದಂಬರಿಗಳಲ್ಲಿ ಸ್ತ್ರೀಪಾತ್ರ ಚಿತ್ರಣ

ನಿಬಂಧಕಾರರು

**ಮಧು.ಎಂ**

ನೋಂದಣಿ ಸಂಖ್ಯೆ – KVTM/K 140901030091
ಕನ್ನಡ ಎಂ.ಫಿಲ್ ವಿದ್ಯಾರ್ಥಿ
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಎನ್.ಮಹೇಶ್ವರಿ**

ಸಹ ಪ್ರಾಧ್ಯಾಪಕರು
ಕನ್ನಡ ಸ್ನಾತಕೋತ್ತರ ವಿಭಾಗ
ಜೆ.ಎಸ್.ಎಸ್.ಕಾಲೇಜು., ಚಾಮರಾಜನಗರ

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

೨೦೧೪–೧೫

## ಅಭ್ಯರ್ಥಿಯ ಘೋಷಣಾ ಪತ್ರ

**"ಡಾ. ಎಂ.ಎಸ್.ವೇದಾರವರ ಕಾದಂಬರಿಗಳಲ್ಲಿ ಸ್ತ್ರೀಪಾತ್ರ ಚಿತ್ರಣ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಹಂಪಿ ವಿಶ್ವವಿದ್ಯಾಲಯದ ಕನ್ನಡ ಎಂ.ಫಿಲ್ ಪದವಿಯ ಕ್ರಮ ಸಂಖ್ಯೆ: KVTM/K 140901030091ರ ವಿದ್ಯಾರ್ಥಿಯಾದ ನಾನು ೨೦೧೪-೧೫ನೆಯ ಸಾಲಿನ ಪರೀಕ್ಷೆಗಾಗಿ **ಡಾ. ಎನ್.ಮಹೇಶ್ವರಿ, ಕನ್ನಡ ಸಹಪ್ರಾಧ್ಯಾಪಕರು, ಜೆ.ಎಸ್.ಎಸ್. ಕಾಲೇಜು, ಚಾಮರಾಜನಗರ** ಇವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸುತ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ಯಾವುದೇ ವಿಶ್ವವಿದ್ಯಾಲಯಗಳ ಪದವಿ, ಡಿಪ್ಲೊಮಾ ಅಥವಾ ಯಾವುದೇ ತತ್ಸಮಾನ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಮೈಸೂರು
ದಿನಾಂಕ: ೧೫-೦೭-೨೦೧೫

ಮಧು ಎಂ
(ಮಧು.ಎಂ)
೨೦೧೪-೧೫ನೇ ಸಾಲಿನ ಎಂ.ಫಿಲ್ ವಿದ್ಯಾರ್ಥಿ
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

# ಮಾರ್ಗದರ್ಶಕರ ಪ್ರಮಾಣಪತ್ರ

೨೦೧೪-೧೫ನೆಯ ಸಾಲಿನಲ್ಲಿ ಕ್ರಮ ಸಂಖ್ಯೆ: KVTM/K 140901030091ರ ಹಂಪಿ ವಿಶ್ವವಿದ್ಯಾಲಯದ ಕನ್ನಡ ಎಂ.ಫಿಲ್ ಪದವಿಯ ವಿದ್ಯಾರ್ಥಿಯಾದ **ಮಧು.ಎಂ** ಅವರು ನನ್ನ ಮಾರ್ಗದರ್ಶನದಲ್ಲಿ **"ಡಾ. ಎಂ.ಎಸ್.ವೇದಾರವರ ಕಾದಂಬರಿಗಳಲ್ಲಿ ಸ್ತ್ರೀಪಾತ್ರ ಚಿತ್ರಣ"** ಎಂಬ ಶೀರ್ಷಿಕೆಯ ನಿಬಂಧವನ್ನು ಎಂ.ಫಿಲ್ ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದಾರೆ.

ಈ ನಿಬಂಧವನ್ನು ಈ ಮೊದಲು ಯಾವುದೇ ಬಗೆಯ ಪದವಿ, ಡಿಪ್ಲೊಮಾ ಅಥವಾ ಯಾವುದೇ ತತ್ಸಮಾನ ಪರೀಕ್ಷೆಗಳಿಗಾಗಿ ಯಾವ ವಿಶ್ವವಿದ್ಯಾಲಯಕ್ಕೂ ಸಲ್ಲಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

(ಡಾ. ಎನ್.ಮಹೇಶ್ವರಿ)
ಕನ್ನಡ ಸಹ ಪ್ರಾಧ್ಯಾಪಕರು
ಜೆ.ಎಸ್.ಎಸ್.ಕಾಲೇಜು
ಚಾಮರಾಜನಗರ

ಮೈಸೂರು
ದಿನಾಂಕ: ೧೫-೦೭-೨೦೧೫

## ಪರಿವಿಡಿ

# ಡಾ. ಎಂ.ಎಸ್.ವೇದಾರವರ ಕಾದಂಬರಿಗಳಲ್ಲಿ ಸ್ತ್ರೀಪಾತ್ರ ಚಿತ್ರಣ



* * * * *

# ಅಧ್ಯಾಯ – ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಸಾಮಾನ್ಯವಾಗಿ ಯಾವುದೇ ಭಾಷೆಯ ಉದಯದೊಡನೆ ಒಂದು ಬಗೆಯ ಸಾಹಿತ್ಯದ ಉದಯವೂ ಆಗುತ್ತದೆ. ಹಾಗಾಗಿ ಕನ್ನಡ ಸಾಹಿತ್ಯವು ಪ್ರಾಚೀನ ಸಾಹಿತ್ಯಗಳಲ್ಲೊಂದಾಗಿದೆ. ಅಪಾರವಾದ ಸಾಹಿತ್ಯ ರಚನೆಯಿಂದಾಗಿ ಸಮೃದ್ಧಿ ಹೊಂದಿರುವ ಕನ್ನಡ ಸಾಹಿತ್ಯವು ವಿಶ್ವಸಾಹಿತ್ಯದಲ್ಲಿ ತನ್ನದೇ ಆದ ಛಾಪನ್ನು ಮೂಡಿಸಿದೆ. ನಮ್ಮ ಕನ್ನಡ ಸಾಹಿತ್ಯ ಕೃತಿಗಳು ಚಂಪೂ, ರಗಳೆ, ಷಟ್ಪದಿ, ತ್ರಿಪದಿ ಮೊದಲಾದ ಪ್ರಾಚೀನ ಸಾಹಿತ್ಯ ರೂಪಗಳಿಂದಲ್ಲದೇ ಸಣ್ಣಕಥೆ, ಭಾವಗೀತೆ, ನಾಟಕ, ಕಾದಂಬರಿ ಮಹಾಕಾವ್ಯ ಮುಂತಾದ ಹೊಸಗನ್ನಡ ಸಾಹಿತ್ಯ ಪ್ರಕಾರಗಳು ಬೆಳೆದುಬಂದಿವೆ. ಹೊಸಗನ್ನಡ ಸಾಹಿತ್ಯ ಪ್ರಕಾರಗಳಲ್ಲಿ ಸ್ವಚ್ಛಂದವಾದ ನಿರ್ಮಾಣದಿಂದಾದ ಸಾಹಿತ್ಯ ಪ್ರಕಾರವಾಗಿದೆ.

ಸಾಹಿತ್ಯವೂ ಅಭಿವ್ಯಕ್ತಿಯ ಒಂದು ಮಾಧ್ಯಮ. ಪುರುಷರು ಹೇಗೆ ತಮ್ಮ ಭಾವನೆಗಳನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಸತೊಡಗಿದರೋ ಅಂದಿನಿಂದಲ್ಲೇ ಮಹಿಳೆಯರು ಅಭಿವ್ಯಕ್ತಿಸತೊಡಗಿದರೆಂದರೆ ಆಶ್ಚರ್ಯವಿಲ್ಲ. ಇದಕ್ಕೆ ನಮ್ಮ ಜಾನಪದ ಸಾಹಿತ್ಯವೇ ಸಾಕ್ಷಿ. "ಹೆಣ್ಣು ಆಗುವುದಕ್ಕಿಂತ ಮಣ್ಣು ಆಗುವುದೇ ಲೇಸು" ಮಣ್ಣಿನ ಮೇಲೆ ಮರವಾಗಿ ಇದ್ದರೆ ತಣ್ಣನೆಯ ನೆರಳಾಗಿ ಇದ್ದೇನು. ಗಂಡು ಹೆಣ್ಣು ಎಂಬುದು ಕೇವಲ ದೇಹ ವ್ಯತ್ಯಾಸ ಅಷ್ಟೇ. ಗಂಡಸಿನಂತೆಯೇ ಆಲೋಚಿಸುವ, ಸ್ಪಂದಿಸುವ, ಪ್ರತಿಭಟಿಸುವ ಶಕ್ತಿ ಹೆಣ್ಣಿಗಿದೆ. ಇದನ್ನೇ ಕನ್ನಡದ ಆದ್ಯ ವಚನಕಾರನಾದ ದೇವರ ದಾಸಿಮಯ್ಯ ಸೊಗಸಾಗಿ ಹೀಗೆ ಹೇಳಿದ್ದಾನೆ. "ಮೊಲೆ ಮೂಡಿ ಬಂದರೆ ಹೆಣ್ಣೆಂಬರು ಗಡ್ಡ ಮೀಸೆ ಬಂದರೆ ಗಂಡೆಂಬರು ಇವೆರಡರ ನಡುವೆ ಉಳಿವಾತ್ಮ ಗಂಡು ಅಲ್ಲ, ಹೆಣ್ಣು ಅಲ್ಲ ಕಾಣ ರಾಮನಾಥ".

೧೨ನೇ ಶತಮಾನದಲ್ಲಿ ನಡೆದ ವಚನಕ್ರಾಂತಿಯಲ್ಲಿ ಹಿಂದೆಂದೂ ದೇಶದ ಯಾವುದೇ ಭಾಗದಲ್ಲೂ ಪಾಲ್ಗೊಳ್ಳದಷ್ಟು ಮಹಿಳೆಯರು ಅನುಭವ ಮಂಟಪದಲ್ಲಿ ದಿಟ್ಟವಾದ ಚರ್ಚೆಗೆ ಇಳಿದುದುಂಟು. "ನಭೊತೋನ ಭವಿಷ್ಯತಿ" ಎನಿಸಿದ ಅಕ್ಕ ಮಹಾದೇವಿ, ಮುಕ್ತಾಯಕ್ಕ. ಆಯ್ದಕ್ಕಿ ಲಕ್ಕಮ್ಮ, ಸೂಳೆಸಂಕವ್ವ ಮುಂತಾದವರು ವಚನಗಳನ್ನು ರಚಿಸಿದುಂಟು. ಅಲ್ಲದೆ ಕಂತಿ, ಹೆಳವನಕಟ್ಟೆ ಗಿರಿಯಮ್ಮ ಸಂಚಿ ಹೊನ್ನಮ್ಮ, ಶೃಂಗಾರಮ್ಮ ಮುಂತಾದವರು ತಮ್ಮ ಸಾಹಿತ್ಯದಿಂದ ಪ್ರಖ್ಯಾತರಾಗಿದ್ದಾರೆ. ಹೀಗೆ ಪರಂಪರಾನುಗತವಾಗಿ ಮಹಿಳೆಯರು ರಚಿಸಿಕೊಂಡು ಬಂದ ಸಾಹಿತ್ಯ ಪರಂಪರೆಯನ್ನು ಆಧುನಿಕ ಯುಗದಲ್ಲೂ ಮಹಿಳೆಯರು ಮುಂದುವರಿಸಿಕೊಂಡು ಬಂದರು.

ಆಧುನಿಕ ಕನ್ನಡ ಮಹಿಳಾ ಸಾಹಿತ್ಯವನ್ನು ಅವಲೋಕಿಸಿದಾಗ ಪ್ರಮುಖವಾದ ನಾಲ್ಕು ಘಟ್ಟಗಳನ್ನು ಕಾಣಬಹುದಾಗಿದೆ. ಮೊದಲನೆಯ ಘಟ್ಟದ ಲೇಖಕಿ ತಿರುಮಲಾಂಬಾ. ಶ್ಯಾಮಲಾ ಬೆಳಗಾಂವಕರ ಮೊದಲಾದವರು ಸಮಕಾಲೀನ ಸಾಮಾಜಿಕ ಸಮಸ್ಯೆಗಳ ಬಗ್ಗೆಯೇ ಹೆಚ್ಚು ಒತ್ತುಕೊಟ್ಟವರು ಆಗಿನ ಪುರುಷಪ್ರಧಾನ ಸಮಾಜದಲ್ಲಿ ಮಹಿಳೆಗೆ ಸ್ವಂತ ಅಸ್ತಿತ್ವದ ಬಗ್ಗೆ ಯೋಚಿಸಬೇಕೆನ್ನುವ ಕಲ್ಪನೆಯೇ ಇರಲಿಲ್ಲ. ಮಹಿಳೆ ಹೆಂಡತಿಯಾಗಿ, ವಿಧವೆಯಾಗಿ ಅಥವಾ ವೇಶ್ಯೆಯಾಗಿ ಹೀಗೆ ಪುರುಷನ ಸಂಬಂಧದಲ್ಲಿಯೇ ಗುರುತಿಸಲ್ಪಡುತ್ತಿದ್ದು ಈ ಮೊದಲ ಪೀಳಿಗೆಯ ಮಹಿಳಾ ಸಾಹಿತ್ಯದಲ್ಲಿ ಮಹಿಳಾ ಪಾತ್ರಗಳ ಆಯಾಮಗಳು ಅತ್ಯಂತ ಸೀಮಿತವಾಗಿದ್ದವು. ಆಗಿನ ಕಾಲದಲ್ಲೇ ಈ ಲೇಖಕಿಯರು ಸಮಾಜದಲ್ಲಿ ತಾವು ಕಂಡ ಅನಿಷ್ಟಗಳ ಬಗ್ಗೆ ಕತೆ–ಕಾದಂಬರಿ, ಲೇಖನ ಇತ್ಯಾದಿಗಳನ್ನು ಬರೆದದ್ದೇ ಒಂದು ರೀತಿಯ ಪ್ರತಿಭಟನೆಯ ಸಂಕೇತವಾಗಿತ್ತು.

ಎರಡನೆಯ ಪೀಳಿಗೆಯ ಲೇಖಕಿಯರು ಹೆಚ್ಚು ಗಟ್ಟಿಯಾಗಿ ವ್ಯವಸ್ಥೆಯನ್ನು ಪ್ರತಿಭಟಿಸಿದ್ದು ಕಂಡುಬರುತ್ತದೆ. ತ್ರಿವೇಣಿ, ಅನುಪಮಾ ನಿರಂಜನ, ಗೀತಾ ಕುಲಕರ್ಣಿ, ಶಾಂತಾದೇವಿ ಕಣವಿ, ಎಂ.ಕೆ.ಇಂದಿರಾ ಇವರ ಸಾಹಿತ್ಯದಲ್ಲಿ ಮಹಿಳೆಯ ಅಸ್ತಿತ್ವದ ಬಗ್ಗೆ ಜಾಗೃತಿ ಉಂಟಾಗಿದ್ದು ಸ್ಪಷ್ಟವಾಗಿದೆ. ಇವರ ಕೃತಿಗಳಲ್ಲಿ ಮನೋವೈಜ್ಞಾನಿಕ ವಿಶ್ಲೇಷಣೆಯನ್ನೂ ಕಾಣಬಹುದು. ಇವರ ಸ್ತ್ರೀಪಾತ್ರಗಳು ಪುರುಷನ ಕೈಗೊಂಬೆಯಾಗಿರದೆ ಸ್ವಂತ ವಿಚಾರಶಕ್ತಿಯುಳ್ಳವರು ಮತ್ತು ಸಮರ್ಥರು ಆಗಿದ್ದು ಒಂದು ಮಹತ್ವದ ಬೆಳವಣಿಗೆಯಾಗಿದೆ.

ಮೂರನೇ ಘಟ್ಟದ ಲೇಖಕಿಯಾದ ರಾಜಲಕ್ಷ್ಮಿ.ಎನ್.ರಾವ್ ಮತ್ತು ವೀಣಾಶಾಂತೇಶ್ವರ ಅವರು ಬದುಕಿನ ಸಂಕೀರ್ಣತೆಯನ್ನು ಸಾಹಿತ್ಯದಲ್ಲಿ ಮೂಡಿಸುವ ಪ್ರಯತ್ನ ಮಾಡಿದರು. ನವ್ಯಸಾಹಿತ್ಯದ ಮುಖ್ಯ ಗುಣಲಕ್ಷಣಗಳಾದ ಅಂತರ್ಮುಖತೆ, ಆತ್ಮಪ್ರಜ್ಞೆ, ಸಂಘರ್ಷದ ಮನೋಭಾವ ಇವನ್ನು ಈ ಘಟ್ಟದ ಸಾಹಿತ್ಯದಲ್ಲಿ ಕಾಣಬಹುದು. ಇವರ ಸಾಹಿತ್ಯದ ಉದ್ದೇಶ ಕೇವಲ ಸಾಮಾಜಿಕ ಅನಿಷ್ಟಗಳನ್ನು ಟೀಕಿಸುವುದಷ್ಟೇ ಆಗಿರಲಿಲ್ಲ. ಸತ್ಯದ ಶೋಧನೆ ಇಲ್ಲಿ ಮುಖ್ಯವಾಗಿತ್ತು.

೪ನೇ ಘಟ್ಟದಲ್ಲಿ ಬರೆಯತೊಡಗಿದ ಲೇಖಕಿಯರು ಸ್ತ್ರೀವಾದ, ಸ್ತ್ರೀಮುಕ್ತಿ ಚಳುವಳಿಗಳಿಂದ ಪ್ರಭಾವಿತರಾಗಿದ್ದರಿಂದ ಅವರ ಸಾಹಿತ್ಯದಲ್ಲಿ ಹೆಚ್ಚಿನ ಸ್ವಂತಿಕೆಯ ಅರಿವು ಹಾಗೂ ಮುಕ್ತ ಅಭಿವ್ಯಕ್ತಿಯನ್ನು ಕಾಣಬಹುದು. ಈ ಹೊತ್ತಿಗೆ ಇವರಿಗೆ ಸಂಪ್ರದಾಯವನ್ನು ಧಿಕ್ಕರಿಸುವ ಎದುರಿಸುವ ಎದೆಗಾರಿಕೆ ಬಂದಿತ್ತು. ವೈದೇಹಿ ಪ್ರತಿಭಾನಂದ ಕುಮಾರ, ಸಾ.ರಾ.ಅಬೂಬಕರ್, ಮಾಲತಿ ಪಟ್ಟಣಶೆಟ್ಟಿ, ನೇಮಿಚಂದ್ರ ಹೇಮಾ ಚ.ಸರ್ವಮಂಗಳಾ

ಇತ್ಯಾದಿ ಲೇಖಕಿಯರು ತಮ್ಮ ಸ್ವಂತ ಅಸ್ತಿತ್ವದ ಬಗ್ಗೆ ಪೂರ್ಣ ಅರಿವು ಉಳ್ಳವರಾಗಿದ್ದು ಅವರ ಸಾಹಿತ್ಯವು ಹಿಂದಿನ ಮಹಿಳಾ ಸಾಹಿತ್ಯಕ್ಕಿಂತ ಸ್ಪಷ್ಟವಾಗಿ ಭಿನ್ನವಾಗಿದೆ.

ಇನ್ನೂ ತೀರಾ ಇತ್ತೀಚಿನ ಲೇಖಕಿಯರಾದ ಮಿತ್ರಾ ವೆಂಕಟ್ರಾಜ್, ಎಚ್.ನಾಗವೇಣಿ, ಎಚ್.ಎಸ್.ಶ್ರೀಮತಿ, ರೇಖಾ ಕಾಖಂಡಕಿ, ಜಾಹ್ನವಿ.ಎಂ.ಎಸ್ ವೇದಾ, ವಿನಯಾವಕ್ಕುಂದ ಇತ್ಯಾದಿ ಮಹಿಳೆಯರ ಸಾಹಿತ್ಯವು ನಮ್ಮ ಸಂಸ್ಕೃತಿಯ ವಿಭಿನ್ನ ಮುಖಗಳನ್ನು ಸಮರ್ಥವಾಗಿ ಚಿತ್ರಿಸುತ್ತದೆ. ತನ್ಮೂಲಕ ಆಧುನಿಕ ಜೀವನದ ಸಂಕೀರ್ಣತೆಯ ವಿವಿಧ ಸ್ತರಗಳ ಸೂಕ್ಷ್ಮ ಒಳನೋಟಗಳನ್ನು ನೀಡುತ್ತದೆ.

ಆಧುನಿಕ ಕನ್ನಡ ಮಹಿಳಾ ಸಾಹಿತ್ಯವು ನವೋದಯ, ಪ್ರಗತಿಶೀಲ, ನವ್ಯ, ದಲಿತ ಬಂಡಾಯ ಹಾಗೂ ಸ್ತ್ರೀವಾದ ಈ ಎಲ್ಲ ಪಂಥಗಳಲ್ಲಿ ಬೆಳೆದುಬಂದಿದೆ. ಸತಿಸಹಗಮನ, ಬಾಲ್ಯವಿವಾಹ, ವಿಧಾವವಿವಾಹ, ಸ್ತ್ರೀ ಶಿಕ್ಷಣ ಮುಂತಾದ ವಿದ್ಯಾಮಾನಗಳು ಸಾಹಿತ್ಯ ಅಧ್ಯಯನದಲ್ಲಿ ಹೊಸ ದೃಷ್ಟಿಕೋನಗಳನ್ನು ಹುಟ್ಟು ಹಾಕಿದವು. ಆ ಕಾಲಘಟ್ಟದಲ್ಲಿ "ಪ್ರಗತಿಶೀಲ" ಪಂಥವೆಂದು ಗುರುತಿಸಿಕೊಂಡ ಸಾಹಿತ್ಯ ಸೃಜನಶೀಲತೆಯು ಇಂತಹ ಅನೇಕ ಮಹಿಳಾ ವಸ್ತುವಿಷಯಗಳನ್ನು ಕುರಿತು ಕಥನ ಪರಂಪರೆಯನ್ನು ಹುಟ್ಟುಹಾಕಿತು. ನವ್ಯಸಾಹಿತ್ಯ ಪರಂಪರೆಯಲ್ಲಿ ಹೊಸದಾದ ಅಸ್ತಿತ್ವವಾದಿ ಚಿಂತನೆಯ ಮೂಲಕ ಕಥಿತವಾದ ಮಹಿಳಾಲೋಕವು ಹೊಸ ಬಗೆಯ ಅನುಭವಗಳನ್ನು ಹುಟ್ಟುಹಾಕಿತು. ಈ ಎಲ್ಲ ಬದಲಾವಣೆಗಳ ಪಕ್ವತೆಯನ್ನು ಎಪ್ಪತ್ತರ ದಶಕದಲ್ಲಿ ಕಾಣುವಂತಾಯಿತೆಂದು ತೋರುತ್ತದೆ. ಮೈಸೂರು ಬರಹಗಾರರ ಒಕ್ಕೂಟದ ಸ್ಥಾಪನೆ, ದಲಿತ-ಬಂಡಾಯ ಮಹಿಳಾ ಚಳುವಳಿಗಳ ಪ್ರತಿಧ್ವನಿಗಳು ಸಾಹಿತ್ಯ ಅಧ್ಯಯನ ಕ್ರಮಗಳಲ್ಲಿ ಹೊಸ ಬಗೆಯ ದೃಷ್ಟಿಕೋನಗಳನ್ನು ಹುಟ್ಟುಹಾಕಿದವು. ಈ ಹೊಸ ಬಗೆಯ ದೃಷ್ಟಿಕೋನಗಳ ಪರಿಣಾಮವೇ ಸ್ತ್ರೀವಾದ ಚಿಂತನೆ.

ವೇದಾ ಅವರು ಸ್ತ್ರೀವಾದ ನೆಲೆಯಲ್ಲಿ ಚಿಂತಿಸುವ ಲೇಖಕಿಯರಲ್ಲಿ ಒಬ್ಬರು. ಇವರು ಬರೆದಿರುವ ಅನೇಕ ಸಣ್ಣಕಥೆಗಳು, ಕಾದಂಬರಿಗಳು, ಕವನಸಂಕಲನಗಳು, ನಾಟಕಗಳು ಸ್ತ್ರೀವಾದಿ ನೆಲೆಯಲ್ಲಿಯೇ ಬಂದಂತವು. ಇವರು ಒಟ್ಟು ನಾಲ್ಕು ಕಾದಂಬರಿಗಳನ್ನು ರಚಿಸಿದ್ದು ಒಂದೊಂದು ಕಾದಂಬರಿಯೂ ಒಂದೊಂದು ರೀತಿಯ ಸ್ತ್ರೀ ಸಮಸ್ಯೆಯನ್ನು ಹೊರಹಾಕುತ್ತದೆ. ಇವರ ಕಾದಂಬರಿಗಳು ಗ್ರಾಮೀಣ, ಪೌರಾಣಿಕ, ಐತಿಹಾಸಿಕ ಕಾದಂಬರಿಗಳಾಗಿದ್ದು ಅವುಗಳಲ್ಲಿ ಬರುವಂತಹ ಸ್ತ್ರೀಪಾತ್ರವನ್ನು ಅಧ್ಯಯನಕ್ಕೆ ಒಳಪಡಿಸುವ ನಿರ್ಧಾರವನ್ನು ಕೈಗೊಳ್ಳಲಾಗಿದೆ. ಸ್ತ್ರೀಪಾತ್ರಗಳನ್ನು ಸಮಕಾಲೀನ ಸಂದರ್ಭದೊಂದಿಗೆ ಹೋಲಿಸಿ ಸಮಸ್ಯೆಗಳನ್ನು ಎದುರಿಸುವ ಸೂಕ್ಷ್ಮ ಒಳನೋಟಗಳನ್ನು ಸ್ತ್ರೀವಾದಿ ನೆಲೆಯಿಂದ ವಿಶ್ಲೇಷಿಸುವ ಉದ್ದೇಶವನ್ನು ಈ ಅಧ್ಯಯನ ಒಳಗೊಂಡಿದೆ.

ಈ ಮೇಲಿನ ಉದ್ದೇಶಗಳಿಂದ ನಿಬಂಧದಲ್ಲಿ ಕೆಲವು ಅಧ್ಯಾಯಗಳನ್ನು ಮಾಡಿಕೊಳ್ಳಲಾಗಿದೆ. ಮೊದಲನೆಯ ಅಧ್ಯಾಯವೂ ನಿಬಂಧದ ಉದ್ದೇಶ ಸ್ವರೂಪ ತಿಳಿಸಲು ಉದ್ದೇಶಿಸಲಾಗಿದೆ.

ಲೇಖಕರ ಕೃತಿಗಳನ್ನು ಅಧ್ಯಯನ ಮಾಡುವಾಗ ಅವರ ವೈಯಕ್ತಿಕ ವಿಚಾರಗಳನ್ನು ತಿಳಿದುಕೊಳ್ಳಬೇಕಾಗಿರುವುದು ಅವಶ್ಯಕವಾದ್ದರಿಂದ ಎರಡನೆಯ ಅಧ್ಯಾಯ ಲೇಖಕಿಯ ಪರಿಚಯವನ್ನು ಮಾಡಿಕೊಡಲು ತೀರ್ಮಾನಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ಹೊಸಗನ್ನಡ ಸಾಹಿತ್ಯದಲ್ಲಿ ಕಾದಂಬರಿಗಳ ಉಗಮ ಮತ್ತು ಬೆಳವಣಿಗೆಯನ್ನು ಚರ್ಚಿಸಲು ತೀರ್ಮಾನಿಸಲಾಗಿದೆ.

ಕಾದಂಬರಿಗಳನ್ನು ಸ್ತ್ರೀವಾದಿ ನೆಲೆಯಿಂದ ಚರ್ಚಿಸಲು ಉದ್ದೇಶಿಸಿರುವುದರಿಂದ ಸ್ತ್ರೀವಾದ ಬಗೆಗೆ ಕೆಲವು ವಿಷಯ ತಿಳಿಯಲು ಅನುಕೂಲವಾಗಲೆಂದು ನಾಲ್ಕನೆಯ ಅಧ್ಯಾಯವನ್ನು ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದ ಚಿಂತನೆ ಎಂದು ಮಾಡಿಕೊಂಡು ಅದನ್ನು ವಿಶ್ಲೇಷಿಸಲು ಉದ್ದೇಶಿಸಲಾಗಿದೆ.

ಐದನೆಯ ಅಧ್ಯಾಯವನ್ನು ಎಂ.ಎಸ್.ವೇದಾರವರ ಕಾದಂಬರಿಗಳಲ್ಲಿ ಸ್ತ್ರೀಪಾತ್ರ ಚಿತ್ರಣವನ್ನು ಕಥಾವಸ್ತು, ಸನ್ನಿವೇಶ ನಿರ್ವಹಣೆ, ಪಾತ್ರ ಪೋಷಣೆ, ಅಭಿವ್ಯಕ್ತಿ/ಶೈಲಿ ಮುಂತಾದ ವಿಭಾಗಗಳಾಗಿ ಕಾದಂಬರಿಯನ್ನು ಅಧ್ಯಯನಕ್ಕೆ ಒಳಪಡಿಸಲು ತೀರ್ಮಾನಿಸಲಾಗಿದೆ.

ಒಟ್ಟಾರೆಯಾಗಿ ಮೇಲೆ ಹೇಳಿದ ಎಲ್ಲಾ ಅಂಶಗಳನ್ನು ವೇದಾರವರ ಕಾದಂಬರಿಗಳಲ್ಲಿ ಅಧ್ಯಯನದಲ್ಲಿ ತಿಳಿಸಲು ಉದ್ದೇಶಿಸಲಾಗಿದೆ.

## ಕೊನೆಟಿಪ್ಪಣಿಗಳು


೧. ಕನ್ನಡ ಸಾಹಿತ್ಯಕೋಶ, ರಾಜಪ್ಪ ದಳವಾಯಿ, ಪು. ೮೭.

೨. ಕನ್ನಡ ಕಾದಂಬರಿ ಸಾಹಿತ್ಯ ಸಮೀಕ್ಷೆ – ವಿವಿಧ ಲೇಖಕರು, ಕನ್ನಡ ಸಾಹಿತ್ಯ ಸಂಘ, ಮೈಸೂರು, ೧೯೮೭, ಪು. ೩೧.

೩. ಇಲ್ಲಿಂದ ಮುಂದೆಲ್ಲಿಗೆ?, ಡಾ. ವೀಣಾಶಾಂತೇಶ್ವರ, ಪ್ರಸಾರಾಂಗ, ಹಂಪಿ, ಪು. ೧–೨.

೪. ಮಹಿಳಾ ಅಧ್ಯಯನ, ಡಾ. ಶಿವಾನಂದ ಎಸ್.ವಿರಕ್ತಮಠ, ಪ್ರಸಾರಾಂಗ, ಹಂಪಿ, ಪು. ೬೮–೬೯.

# ಅಧ್ಯಾಯ - ೨

# ಲೇಖಕಿಯ ಇತಿ-ವೃತ್ತ, ವೃತ್ತಿ-ಪ್ರವೃತ್ತಿ

ಶತಶತಮಾನಗಳಿಂದ ಹೆಣ್ಣಿಗೆ ಸ್ವಾತಂತ್ರ್ಯವಿಲ್ಲ ಎಂದು, ಅವಳನ್ನು ಶೋಷಣೆ ಮಾಡುತ್ತಾ ಬಂದಿರುವ ನಮ್ಮ ಪರಂಪರೆಯಲ್ಲಿ ಅವಳಿಗೆ ಯಾವುದೇ ಸ್ಥಾನಮಾನವಿರಲಿಲ್ಲ. ಮನು ಮಹರ್ಷಿ ಹೇಳುವಂತೆ "ನಸ್ತ್ರೀ ಸ್ವಾತಂತ್ರ್ಯ ಮರ್ಹತಿ" ಬಾಲ್ಯದಲ್ಲಿ ತಂದೆ-ತಾಯಿಯ, ಯೌವನದಲ್ಲಿ ಗಂಡನ, ವೃದ್ಧಾಪ್ಯದಲ್ಲಿ ಮಗನ ಆಶ್ರಯದಲ್ಲಿ ಇರಬೇಕೆಂದು ಹೇಳಿದ್ದಾನೆ. ಅಂತೆಯೇ ಹೆಣ್ಣಿಗೆ ಒಂದು ಕಡೆ ದೇವತೆಯ ಸ್ಥಾನಕೊಟ್ಟು ಮತ್ತೊಂದು ಕಡೆಯಿಂದ ಅವಳನ್ನು ಶೋಷಿಸುವ ಪರಿ ಬೆಳೆಯತೊಡಗಿತು. ಪುರಾಣ ಕೃತಿಗಳಾದ ಮಹಾಭಾರತ, ರಾಮಾಯಣ ಇತ್ಯಾದಿಗಳಲ್ಲಿ ಬರುವ ಸ್ತ್ರೀಕೂಡ ಇದಕ್ಕೆ ಹೊರತಾಗಿರಲಿಲ್ಲ. ಅದೇ ಉದ್ದೇಶದಿಂದಲೇ ವೇದಾರವರು ಮಹಾಭಾರತ ಕಾಲದಲ್ಲಿ ದ್ರೌಪದಿಯ ಮೇಲೆ, ಯಯಾತಿಯ ಕಾಲದಲ್ಲಿ ಮಾಧವಿ, ಲಕ್ಷ್ಮೀಯರ ಮೇಲೆ ಮಾಡಿದ ಶೋಷಣೆಯನ್ನು ಇಂದಿನ ಮಹಿಳೆಯರ ಮೇಲಿನ ಶೋಷಣೆಯಂತೆಯೇ ಚಿತ್ರಿಸಿದ್ದಾರೆ. ಸ್ತ್ರೀಸಮಸ್ಯೆಯನ್ನು ಸ್ತ್ರೀವಾದಿ ನೆಲೆಯಲ್ಲಿ ನೋಡಬಯಸಿರುವ ಕಾದಂಬರಿಗಾರ್ತಿಯಲ್ಲಿ ಡಾ. ಎಂ.ಎಸ್.ವೇದಾರವರು ಕೂಡ ಒಬ್ಬರು.

ಡಾ. ಎಂ.ಎಸ್.ವೇದಾರವರು ದಿನಾಂಕ ೮-೫-೧೯೬೫ರಲ್ಲಿ ಮೈಸೂರಿನಲ್ಲಿ ಜನಿಸಿದರು. ತಂದೆ ಶಿವಣ್ಣ, ತಾಯಿ ಶ್ರೀಮತಿ ದೇವೀರಮ್ಮ. ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಎಂ.ಎ. ಪದವಿ ಮತ್ತು ಪಿಎಚ್.ಡಿ. ಪದವಿಯನ್ನು ಪಡೆದ ಇವರು ಪ್ರಸ್ತುತ ಪಿರಿಯಾಪಟ್ಟಣ ಸರ್ಕಾರಿ ಕಾಲೇಜಿನಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಇವರು ಹಲವಾರು ಕಥಾಸಂಕಲನಗಳು ಕವನ ಸಂಕಲನಗಳು. ಕಾದಂಬರಿಗಳು ನಾಟಕಗಳನ್ನು ರಚಿಸುವುದು ಇವರ ಪ್ರವೃತ್ತಿಯಾಗಿದೆ. ಇವರು ರಚಿಸಿರುವ ಕೃತಿಗಳೆಂದರೆ

**ಕವನ ಸಂಕಲನಗಳು**

ಅ) ಕಾವ್ಯ ಕೂಸು (೧೯೮೫)

ಆ) ಗಂಗೋತ್ರಿಯಲ್ಲಿ (೧೯೮೭)

ಇ) ಬಿಳಲುಗಳು (೧೯೮೯)

ಈ) ದಾಖಲಾಗುವುದು ಬೇಡ (೨೦೦೪)

### ಕಥಾಸಂಕಲನ

ಅ) ಪ್ರೀತಿ ಮತ್ತು ಸಾವು (೧೯೯೩)

ಆ) ಪಾಲು (೧೯೯೭)

ಇ) ಬಿಳಿಹೆಣ್ಣು ಮತ್ತು ದುಂಡವ್ವನ ದೆವ್ವ (೨೦೦೨)

ಈ) ಮುಳ್ಳುಮನೆಯ ಮೇಲೆ (೨೦೦೯)

### ಕಾದಂಬರಿಗಳು

ಅ) ಜಮೀನು (೨೦೦೦)

ಆ) ಜಯ (೨೦೦೪)

ಇ) ಕಪ್ಪು ಕಿವಿಯ ಬಿಳಿಯ ಕುದುರೆಗಳು (೨೦೦೭)

ಈ) ರಾಜ ಒಡೆಯರ್ (೨೦೧೦)

### ನಾಟಕಗಳು

ಅ) ಉತ್ತರ ಶಾಕುಂತಲಾ (೨೦೦೬)

### ಇತರೆ

ಅ) ಚದುರಂಗ (ಮನೋಗ್ರಾಫ್ ೨೦೦೧)

ಆ) ಆರ್ದ್ರಗರ್ವದ ಹುಡುಗಿ (೨೦೧೦)
(ವೈದೇಹಿಯವರ ಸಾಹಿತ್ಯದ ಸ್ತ್ರೀಸಂಕಥನ ಅಧ್ಯಯನ)

### ಪ್ರಶಸ್ತಿಗಳು ಮತ್ತು ಬಹುಮಾನಗಳು

೧. ಗೀತಾ ದೇಸಾಯಿ ದತ್ತಿನಿಧಿ ಬಹುಮಾನ

೨. ಹೆಚ್.ವಿ.ಸಾವಿತ್ರಮ್ಮ ದತ್ತಿನಿಧಿ ಬಹುಮಾನ

೩. ಮಾಣಿಕ್‌ಬಾಯ್ ಪಾಟೀಲ್ ಪ್ರಶಸ್ತಿ (ಕಲಬುರ್ಗಿ)

೪. ಹಾವನೂರು ಪ್ರಶಸ್ತಿ (ಹಾವೇರಿ)

೫. ಭಾರತೀಸುತ ಕಾದಂಬರಿ ಪ್ರಶಸ್ತಿ (ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು)

೬. ಗೊರೂರು ಸಾಹಿತ್ಯ ಪ್ರಶಸ್ತಿ (ಬೆಂಗಳೂರು)

೭. ಮಾತೋಶ್ರೀ ರತ್ನಮ್ಮ ಹೆಗ್ಗಡೆ ಪ್ರಥಮ ಬಹುಮಾನ
(ವಿದ್ಯಾವರ್ಧಕ ಸಂಘ, ಧಾರವಾಡ)

೮. ಇನ್‌ಪೋಸಿಸ್ ಪ್ರತಿಷ್ಠಾನ ಪ್ರಶಸ್ತಿ (ಧಾರವಾಡ)

ವಿಭಿನ್ನ ಪಾತ್ರಗಳ ಮೂಲಕ ಆಯಾ ಕಾಲದ ಸ್ತ್ರೀ ಪಾತ್ರಗಳನ್ನು ತನ್ನ ಕಾಲದ ಸಂವೇದನೆಯ ಮೂಲಕ ಸ್ತ್ರೀಯರ ಮೇಲೆ ಪುರುಷ ಚಕ್ರಾಧಿಪತ್ಯದಲ್ಲಿ ಸಿಲುಕಿ ಅನುಭವಿಸುವ ನೋವಿನ ಧ್ವನಿಯನ್ನು ವೇದಾರವರು ಸೃಜನಶೀಲ ಮನಸ್ಸನ್ನು ಮಾನವೀಯ ನೆಲೆಗಟ್ಟಿನಲ್ಲಿ ನೈತಿಕತೆಯ ಚೌಕಟ್ಟಿನಲ್ಲಿ ಪ್ರಜ್ಞಾಪೂರ್ವಕವಾಗಿ ರೂಪಿಸಿದ್ದಾರೆ. ತಮ್ಮ ಅಭಿಜಾತ, ದೃಷ್ಟಿಕೋನ ಸೃಜನಶೀಲ ಬರವಣಿಗೆ ಪುರಾಣ ಕಥಾವಸ್ತುವನ್ನು ಸಮಕಾಲೀನಗೊಳಿಸುವಲ್ಲಿ ಯಶಸ್ವಿಯಾಗಿದ್ದಾರೆ. ಸ್ತ್ರೀವಾದಿ ನೆಲೆಯಲ್ಲಿ ಚಿಂತಿಸುವ ಲೇಖಕಿಯಲ್ಲಿ ಡಾ. ಎಂ.ಎಸ್.ವೇದಾರವರು ಯಶಸ್ವಿಯಾಗಿದ್ದಾರೆ.

## ಕೊನೆಟಿಪ್ಪಣಿಗಳು

೧. ಡಾ. ಎಂ.ಎಸ್.ವೇದಾರವರ ಕಥಾಸಂಕಲನಗಳಲ್ಲಿ ಸ್ತ್ರೀಪಾತ್ರ ಚಿತ್ರಣ, ನಿರ್ಬಂಧ, ಶೋಭ.ಹೆಚ್.ಎಸ್, ಪು. ೪೫.

# ಅಧ್ಯಾಯ – ೩

# ಕಾದಂಬರಿಗಳ ಉಗಮ ಮತ್ತು ಬೆಳವಣಿಗೆ

ಕನ್ನಡ ಸಾಹಿತ್ಯವು ಪ್ರಾಚೀನ ಸಾಹಿತ್ಯಗಳಲ್ಲೊಂದಾಗಿದೆ. ಅಪಾರವಾದ ಸಾಹಿತ್ಯ ರಚನೆಯಿಂದಾಗಿ ಸಮೃದ್ಧಿ ಹೊಂದಿರುವ ಕನ್ನಡ ಸಾಹಿತ್ಯವು ವಿಶ್ವಸಾಹಿತ್ಯದಲ್ಲಿ ತನ್ನದೇ ಆದ ಛಾಪನ್ನು ಮೂಡಿಸಿದೆ. ನಮ್ಮ ಕನ್ನಡ ಸಾಹಿತ್ಯ ಕೃತಿಗಳು. ಚಂಪೂ, ರಗಳೆ, ಷಟ್ಪದಿ, ತ್ರಿಪದಿ ಮೊದಲಾದ ಪ್ರಾಚೀನ ಸಾಹಿತ್ಯ ರೂಪಗಳಿಂದಲ್ಲದೇ ಸಣ್ಣಕಥೆ, ಭಾವಗೀತೆ, ನಾಟಕ, ಕಾದಂಬರಿ, ಮಹಾಕಾವ್ಯ ಮುಂತಾದ ಹೊಸಗನ್ನಡ ಸಾಹಿತ್ಯದಿಂದ, ಕನ್ನಡ ಸಾಹಿತ್ಯ ವಿಸ್ತಾರವಾಗಿ ಬೆಳೆದಿದೆ.

ಓದುಗರಿಗೆ ಆಸಕ್ತಿಯನ್ನುಂಟು ಮಾಡಿ ಅವರ ಮೆಚ್ಚುಗೆಯನ್ನು ಪಡೆಯುವ ಸುಂದರ ಶೈಲಿಯ ಸರಳ ಗದ್ಯ ರೂಪವೇ ಕಾದಂಬರಿ ಎನ್ನಬಹುದು. ಜನಜೀವನದಲ್ಲಿ ನಡೆಯುವ ಘಟನೆಗಳು, ಕ್ರಿಯೆಗಳು, ಅನುಭವಗಳು ಸಂಗತಿಗಳು ಕಾದಂಬರಿಯಲ್ಲಿ ಚಿತ್ರಿತವಾಗುತ್ತವೆ.

ವಿಶ್ವ ಸಾಹಿತ್ಯದಲ್ಲಿ ಕಾದಂಬರಿಗೆ ಅದರದೇ ಆದ ವಿಶಿಷ್ಟ ಸ್ಥಾನವಿದ್ದು ಜನಪ್ರಿಯ ಓದಿನ ಮಾಧ್ಯಮವಾಗಿದೆ. ಪ್ರಪಂಚದಲ್ಲಿ ಅತ್ಯಂತ ಪ್ರಾಚೀನ ಕಾದಂಬರಿಗಳು ಈಜಿಪ್ಟ್ ದೇಶದವು. ಪ್ರಾಯಶಃ ಕ್ರಿಪೂ. ೨೦–೨೧ನೇ ಶತಮಾನಗಳಿಗೆ ಸೇರಿದ ಕೆಲವು ಕೃತಿಗಳು ದೊರೆತಿವೆ. ಇವುಗಳಲ್ಲಿ ಹಾಸ್ಯ ಮತ್ತು ವಿಡಂಬನೆಯಿದ್ದು ಅರಸನನ್ನು ಹಾಸ್ಯ ಮಾಡುತ್ತವೆ. ಇದು ಮುಂದೆ ಕಾದಂಬರಿಕಾರರಿಗೆ ಸ್ಫೂರ್ತಿ ನೀಡಿತು. ವಿಶ್ವದ ಕೆಲವು ಮಹಾನ್ ಕಾದಂಬರಿಗಳೆಂದರೆ ಟಾಲ್‌ಸ್ಟಾಯ್‌ರವರ "ಅನ್ನಾ ಕರೆನಿನಾ" ಮತ್ತು "ವಾರ್ ಅಂಡ್ ಪಿಸ್" ಜಿನುವಾ ಅಚಿಚೆರವರ "ಥಿಂಗ್ಸ್ ಫಾಲ್ ಅಪಾರ್ಟ್", ವಿಭೂತಿ ಭೂಷಣ ಬಂದೋಪಾಧ್ಯಾಯರ "ಪಥೇರ್ ಪಾಂಚಾಲಿ", ಪ್ರೇಮ್‌ಚಂದ್‌ರವರ "ಗೋದಾನ", ಥಾಮಸ್ ಹಾರ್ಡಿಯವರ "ರಿಟರ್ನ್ ದಿ ನೇಟಿವ್" ತಕಳಿ ಶಿವಶಿಂಕರ್ ಪಿಳ್ಳೆಯವರ "ಚೆಮ್ಮೀನ್" ಮುಂತಾದವು.

೧೯ನೇ ಶತಮಾನದಲ್ಲಿ ಪ್ರಾರಂಭವಾದ ಕಾದಂಬರಿ ಸಾಹಿತ್ಯವು ಈಗ ಅದ್ಭುತವಾಗಿ ಪ್ರಸಿದ್ಧಿಯನ್ನು ಹೊಂದಿದೆ. ೧೯ನೆಯ ಕೊನೆಯಲ್ಲಿ ಇಂಗ್ಲಿಷ್ ಕಾದಂಬರಿಕಾರರು ಪ್ರಭಾವಕ್ಕೆ ನಮ್ಮ ದೇಶದ ಲೇಖಕರು ಒಳಗಾದರು. ಅದರ ಪರಿಣಾಮ ಬಂಗಾಳ ಮತ್ತು ಮಹಾರಾಷ್ಟ್ರಗಳಲ್ಲಿ ಮೊದಲು ಕಾಣಬಹುದು. ಬಂಕಿಮಚಂದ್ರ, ಆಪ್ಟೆಯವರು ಕಾದಂಬರಿಯುಗದ ಶಕಪುರುಷರಾದರು.

ಕನ್ನಡದಲ್ಲಿ ಬಿ.ವೆಂಕಟಾಚಾರ್ಯರು ಮತ್ತು ಗಳಗನಾಥರು ಮೊದಲಿಗರಾಗಿ ಕಾದಂಬರಿ ಧ್ವಜವನ್ನು ಹಾರಿಸಿದರು. ವೆಂಕಟಾಚಾರ್ಯರು ಬಂಕಿಮಚಂದ್ರರ

ಕಾದಂಬರಿಗಳನ್ನು ಮೂಲದ ಸ್ವಾರಸ್ಯ ಕೆಡದಂತೆ ಕನ್ನಡಕ್ಕೆ ಅನುವಾದಿಸಿದರು. ಗಳಗನಾಥರು ಆಪ್ಟೆಯವರ ಮರಾಠಿ ಕಾದಂಬರಿಗಳನ್ನು ಅನುವಾದಿಸಿದರು. ಇವರು ಸ್ವತಂತ್ರ ಐತಿಹಾಸಿಕ ಕಾದಂಬರಿಗಳನ್ನು ರಚಿಸಿದ್ದಾರೆ.

ಅನಂತರ ಗುಲ್ವಾಡಿ ವೆಂಕಟರಾಯರು ೧೮೯೮ರಲ್ಲಿ ಪ್ರಕಟವಾದ "ಇಂದಿರಾಬಾಯಿ" ಕನ್ನಡದ ಮೊದಲ ಸಾಮಾಜಿಕ ಕಾದಂಬರಿಯಾಗಿದೆ. ಎಂ.ಎಸ್.ಪುಟ್ಟಣ್ಣನವರ "ಮಾಡಿದ್ದುಣ್ಣೊ ಮಹಾರಾಯ" ಎಂಬ ಸ್ವತಂತ್ರ ಕಾದಂಬರಿಯು ಕಾದಂಬರಿ ಸಾಹಿತ್ಯದಲ್ಲಿ ಗಮನಾರ್ಹವಾದುದು. ಅಂದಿನಿಂದ ೨೦ನೆಯ ಶತಮಾನವನ್ನು ಕಾದಂಬರಿಗಳ ಹೆಚ್ಚಳ ಯುಗವೆಂದು ಕರೆಯಬಹುದು. ಏಕೆಂದರೆ ಉಗಮಗೊಂಡ ಕಾದಂಬರಿಗಳು ಮುಂದೆ ನವೀನತೆ ಮತ್ತು ಆಧುನಿಕತೆಯೊಂದಿಗೆ ವಿಫುಲವಾಗಿ ಬೆಳೆಯಿತು. ೧೯೩೦ರಿಂದೀಚೆಗೆ ಅನೇಕ ಶ್ರೇಷ್ಠ ಸ್ವತಂತ್ರ ಕಾದಂಬರಿಗಳು ಕನ್ನಡದಲ್ಲಿ ರಚಿತವಾದವು. ಆಧುನಿಕ ಗದ್ಯ ಸಾಹಿತ್ಯದ ಕೀರ್ತಿಯನ್ನು ಹೆಚ್ಚಿಸಿವೆ. ಕಾರಂತರ "ಔದರ್ಯದ ಉರುಳ" ಮಿರ್ಜಿಯವರ "ಪ್ರತಿಸರ್ಕಾರ", ರಾಷ್ಟ್ರಪುರುಷ ಕಟ್ಟೀಮನಿಯವರ "ಸ್ವಾತಂತ್ರ್ಯದೆಡೆಗೆ" ಮತ್ತು ಮಾಡಿ ಮಡಿದವರು" ತ.ರಾ.ಸು. ಅವರ ರಕ್ತತರ್ಪಣ, ನಿರಂಜನರ "ಚಿರಸ್ಮರಣೆ" ಇವೆಲ್ಲವು ಸ್ವಾತಂತ್ರ್ಯ ಚಳುವಳಿಯನ್ನು ನೇರವಾಗಿ ನಿರೂಪಿಸುತ್ತದೆ.

ಎ.ಎಮ್.ಇನಾಂದರ್‌ರವರ "ಮೂರಾಬಟ್ಟೆ", ಅನಕೃ ಅವರ ಆಗಸ್ಟ್, ಶ್ರೀರಂಗ ಅವರ "ಪುರುಷಾರ್ಥ" "ಕುಮಾರ ಸಂಭವ" ಮೊದಲಾದ ಕಾದಂಬರಿಗಳು ರಾಜಕೀಯ ಹೋರಾಟದ ಜೀವನ ಚಿತ್ರಿಸಿವೆ. ಐತಿಹಾಸಿಕ ಕಾದಂಬರಿಗಳಾದ ಶ್ರೀನಿವಾಸರ ಚೆನ್ನಬಸವನಾಯಕ, ಕೆಳದಿಯ ರಾಜ್ಯದ ಕೊನೆಯ ಸ್ಥಿತಿ ಹೈದರನ ಕುತಂತ್ರದ ಫಲವಾಗಿ ಆ ರಾಜ್ಯ ಮತ್ತು ರಾಜಧಾನಿ ಅವನ ವಶವಾದ ಬಗೆಗೆ ನಿರೂಪಿಸಲಾಗಿದೆ. ತ.ರಾ.ಸು. ಅವರ ಹಂಸಗೀತೆ, ದುರ್ಗದ ಇತಹಾಸದ ಹಿನ್ನೆಲೆಯನ್ನು ಚಿತ್ರಿಸಿದೆ. ಕೆ.ವಿ.ಅಯ್ಯರ್‌ರವರ "ಶಾಂತಲ" ಸೀತಾರಾಮ ಶಾಸ್ತ್ರೀಗಳ ವೀರ ಶೃಂಗಾರಗಳಿಂದ ಕೂಡಿದ "ದೌಲತ್" ಮೊದಲಾದ ಕಾದಂಬರಿಗಳು ಕನ್ನಡಕ್ಕೆ ಕಾಣಿಕೆಯಾಗಿ ಬಂದಿವೆ. ಬಿ.ಪುಟ್ಟಸ್ವಾಮಯ್ಯ ಅವರ "ಕಲ್ಯಾಣಕ್ರಾಂತಿ" ಬಸವಣ್ಣನವರ ಜೀವನವನ್ನು ಕುರಿತು ಬರೆದ ಕಾದಂಬರಿಯಾಗಿದೆ.

ಹೆಚ್.ದೇವೀರಪ್ಪನವರ "ಬೆಳವಲದ ಮಡಿಲಲ್ಲಿ". ತ.ರಾ.ಸು.ರವರ "ಬೆಳವಲದ ಭಾಗ್ಯಲಕ್ಷ್ಮಿ" ಕೃಷ್ಣಮೂರ್ತಿ ಪುರಾಣಿಕರ "ಹಬ್ಬಿದ ಬಳ್ಳಿ" ಕಟ್ಟೀಮನಿಯವರ "ಮಣ್ಣು ಮತ್ತು ಹೆಣ್ಣು" ಚದುರಂಗರ "ಸರ್ವಮಂಗಳಾ" ಇವೇ ಮೊದಲಾದವು ಹಳ್ಳಿಯ ಜೀವನವನ್ನು ಸುಂದರವಾಗಿ ಮೂಡಿಸುತ್ತದೆ. ಸಂಪೂರ್ಣ ಗ್ರಾಮೀಣ ಜೀವನವನ್ನು ಅಂಶಿಕವಾಗಿ ಚಿತ್ರಿಸಿರುವ ಕಾದಂಬರಿ ಕುವೆಂಪುರವರ "ಕಾನೂನು ಹೆಗ್ಗಡತಿ", "ಮಲೆಗಳಲ್ಲಿ

ಮದುಮಗಳು", ರಾವ್ ಬಹದ್ದೂರ್‌ರವರ "ಗ್ರಾಮಾಯಣ" ಹಳ್ಳಿಯ ಜೀವನ. ಅಲ್ಲಿಯ ಜೀವನದ ಲೋಪದೋಷ, ಹರಿಜನ ಸಮಸ್ಯೆ ಬಗ್ಗೆ ಮಾರ್ಮಿಕವಾಗಿ ರಚಿಸಿರುವ ಕಾದಂಬರಿಯಾಗಿದೆ.

ಕೆ.ವಿ.ಎನ್.ರಾವ್ ಅವರ ಮುನಿಯರ ಮಾದರಿ ಕಟ್ಟೀಮನಿಯವರ "ನೀ ನನ್ನ ಮುಟ್ಟಬೇಡ", ಶಾಂತಿನಾಥ ದೇಸಾಯಿ ಅವರ "ಮುಕ್ತಿ" ಯಶವಂತ ಚಿತ್ತಾಲರ "ಮೂರುದಾರಿ"ಗಳು ಅಭಿವ್ಯಕ್ತಿಯ ಮತ್ತು ತಂತ್ರಗಳಲ್ಲಿ ಹೊಸ ಹೆಜ್ಜೆಗಳಾಗಿವೆ. ಎಸ್.ಎಲ್.ಭೈರಪ್ಪನವರ "ಪರ್ವ" ಮಹಾಭಾರತವನ್ನು ಕುರಿತು ತಮ್ಮದೇ ಆದ ದೃಷ್ಟಿಯಲ್ಲಿ ವಿಶ್ಲೇಷಿಸಿರುವ ಕಾದಂಬರಿಯಾಗಿದೆ.

ಸ್ವಾತಂತ್ರ್ಯೋತ್ತರದ ಮತ್ತೊಂದು ವೈಶಿಷ್ಟ್ಯವೆಂದರೆ ಸ್ತ್ರೀಯರ ಕಾದಂಬರಿಗಳನ್ನು ರಚಿಸುವುದು. ಇವರಲ್ಲಿ ತ್ರಿವೇಣಿ, ಅನುಪಮ ನಿರಂಜನ, ವೈ.ವಿ.ಇಂದಿರಾಬಾಯಿ ಆರ್ಯಾಂಭಪಟ್ಟಾಭಿ, ಜಯಲಕ್ಷ್ಮಿ, ಕೆ.ಪ್ರಭಾ, ಶಕುಂತಲ ಎ.ಪಿ. ಮಾಲತಿ ಇವರೇ ಅಗ್ರಗಣ್ಯರು.

ತ್ರಿವೇಣಿಯವರ "ಸೋತುಗೆದ್ದವಳು" ಕಾದಂಬರಿಯಲ್ಲಿ ಸಮಾಜದ ಹಾಗೂ ಬದುಕಿನ ಅನೇಕ ಮುಖಗಳನ್ನು ತಮ್ಮ ಕಾದಂಬರಿಯಲ್ಲಿ ಕಟ್ಟಿಕೊಟ್ಟಿದ್ದಾರೆ. "ಗಂಡಿನದು ರಸಿಕತನ, ಹೆಣ್ಣಿನದಾದರೆ ವ್ಯಭಿಚಾರ" ಎಂಬುದನ್ನು ನಮ್ಮ ಸಂಸ್ಕೃತಿ ಗುಟ್ಟಾಗಿ ಒಪ್ಪಿಕೊಂಡಿರುವ ಅಂಶ. ಶೀಲವೆಂಬುದು ಹೆಣ್ಣಿಗೆ ಮಾತ್ರ ಒಪ್ಪಿಸಿಕೊಟ್ಟ ಗುತ್ತಿಗೆಯಲ್ಲ ಎಂದು ತ್ರಿವೇಣಿ ಈ ಕೃತಿಯಲ್ಲಿ ಪ್ರತಿಪಾದಿಸಿದ್ದಾರೆ. "ಸದಾನಂದ"ದಲ್ಲಿ ಆದರ್ಶ ಅಡಕವಾಗಿದೆ. ಇವುಗಳಷ್ಟೇ ಅಲ್ಲದೇ ಅಪಸ್ವರ, ದೂರದಬೆಟ್ಟ, ಬೆಕ್ಕಿನಕಣ್ಣು ಮೊದಲಾದ ಕಾದಂಬರಿಗಳು ಬಹಳ ಪ್ರಸಿದ್ಧವಾಗಿವೆ. ಮಾನವ ಜೀವನದ ಹಲವು ಜಟಿಲ ಹಾಗೂ ಮನೋ ವೈಜ್ಞಾನಿಕ ಸಮಸ್ಯೆಯ ಮೇಲೆ ಇವರ ಕಾದಂಬರಿಗಳು ರಚಿತಗೊಂಡಿವೆ.

ಅನುಪಮಾ ನಿರಂಜನರವರ "ಸಂಕೋಲೆಯೊಳಗಿಂದ"........... ಹೆಣ್ಣಿನ ಮೇಲೆ ಗಂಡಿನ ದಬ್ಬಾಳಿಕೆ, ಚಿತ್ತಮೋಹನದಲ್ಲಿ ವಿಧವಾ ವಿವಾಹದ ಸಮಸ್ಯೆಯನ್ನೂ ಸ್ತ್ರೀಯರ ಮಾನಸಿಕ ತೊಳಲಾಟವನ್ನು ಚೆನ್ನಾಗಿ ಚಿತ್ರಿಸಿರುತ್ತಾರೆ. "ಮಾಧವಿ" ಹಿಂದೂ ಧರ್ಮದ ಆಚರಣೆಗಳ ನಡುವೆ ಹೆಣ್ಣು ಪಶುವಿನಂತೆ ಬಳಸಲ್ಪಡುವ ಒಂದು ಚಿತ್ರ ಇಲ್ಲಿದೆ. ನೀಳಾದೇವಿಯವರ "ಪ್ಲಾಟ್ ಫಾರಂ ಮೇಲೆ ಒಂದು ರಾಶಿ"ಯಲ್ಲಿ ಹೆಣ್ಣಿನ ಧೈರ್ಯ ಮತ್ತು ಸ್ವಾಭಿಮಾನವನ್ನು ಚಿತ್ರಿಸಿದ್ದಾರೆ.

ಇತ್ತೀಚಿನ ದಶಕಗಳಲ್ಲಿ ಕಾದಂಬರಿಕಾರ್ತಿಯರು ಕಾದಂಬರಿ ಸಾಹಿತ್ಯವನ್ನು ಸಂಪದ್ಭರಿತವಾಗಿಸಿದ್ದಾರೆ. ಅಡಿಗೆಮನೆ ಸಾಹಿತ್ಯವೆಂದು ನಿಂದೆಗೊಳಗಾಗಿದ್ದ ಸ್ತ್ರೀ ಕಾದಂಬರಿಗಳು ಇತ್ತೀಚಿನ ದಿನಗಳಲ್ಲಿ ಪ್ರಖ್ಯಾತವಾಗಿವೆ. ಗೀತಾನಾಗಭೂಷಣ, ಗೀತಾ

ಕುಲಕರ್ಣಿ, ಈಚನೂರು, ಶಾಂತೆ ಜಯಲಕ್ಷ್ಮಿ, ಎ.ಪಿ.ಮಾಲತಿ, ಯಮುನಾಮೂರ್ತಿ, ರೇಖಾ ಕುಲಕರ್ಣಿ, ಎಚ್.ಎಸ್.ಪಾರ್ವತಿ, ಟಿ.ಗಿರಿಜಾ ನಿರುಪಮಾ, ನೀರಜಾಕ್ಷಿ, ತನುಜಾ, ಪ್ರೇಮಾಭಟ್, ಸಾ.ರಾ.ಅಬೂಬಕರ್ ಮುಂತಾದವರು ಉದಯೋನ್ಮುಖ ಕಾದಂಬರಿಕಾರ್ತಿಯರು ತಮ್ಮ ಪ್ರತಿಭೆಯಿಂದ ಕಾದಂಬರಿ ಸಾಹಿತ್ಯವನ್ನು ಪರಿಪೂರ್ಣಗೊಳಿಸಲು ಶ್ರಮಿಸುತ್ತಿದ್ದಾರೆ. ಈ ಸಾಲಿಗೆ ಮಿತ್ರಾ ವೆಂಕಟ್ರಾಜ್, ಎಚ್.ನಾಗವೇಣಿ, ಎಚ್.ಎಸ್.ಶ್ರೀಮತಿ ರೇಖಾ ಕಾಖಂಡಿಕಿ, ಜಾಹ್ನವಿ, ಎಂಎಸ್.ವೇದಾ, ವಿನಯಾವಕ್ಕುಂದರವರು ಸಹ ಸೇರುತ್ತಾರೆ.

ಮೇಲೆ ತಿಳಿಸಿರುವ ತೀರಾ ಇತ್ತೀಚಿನ ಲೇಖಕಿಯರು ತಮ್ಮ ವಿಚಾರವಂತಿಕೆ, ಅಸ್ತಿತ್ವದೊಂದಿಗೆ ಸ್ತ್ರೀವಾದಿ ವಿಮೋಚನ ಚಳುವಳಿ, ಸ್ತ್ರೀವಾದದ ಅಲೆಯ ಪ್ರಭಾವದಿಂದಾಗಿ ತಮ್ಮ ಲೇಖನಗಳಲ್ಲಿ ಸ್ತ್ರೀ ಸಮಸ್ಯೆಗಳನ್ನು ತಮ್ಮದೇ ರೀತಿಯಲ್ಲಿ ಸ್ತ್ರೀವಾದಿ ನೆಲೆಯಲ್ಲಿ ಬರೆಯತೊಡಗಿದ್ದರು. ಅಂತಹ ಬರಹಗಾರ್ತಿಯರಲ್ಲಿ ಎಂ.ಎಸ್.ವೇದಾರವರು ಕೂಡ ಒಬ್ಬರು.

ವೇದಾರವರ ನಾಲ್ಕು ಕಾದಂಬರಿಗಳು ಸ್ತ್ರೀ ಶೋಷಣೆಯನ್ನು ಒಳಗೊಂಡಿರುವುದಾಗಿದೆ. ಒಂದೊಂದು ಕಾದಂಬರಿಯೂ ಒಂದೊಂದು ರೀತಿಯ ಸ್ತ್ರೀ ಸಮಸ್ಯೆಗಳನ್ನು ಚಿತ್ರಿಸುತ್ತದೆ. ಹಾಗಾಗಿ ನಾನು ಈ ನಿಯೋಜಿತ ನಿಬಂಧಕ್ಕಾಗಿ ಎಂ.ಎಸ್.ವೇದಾರವರ ಕಾದಂಬರಿಗಳನ್ನು ಆಯ್ದುಕೊಂಡಿದ್ದೇನೆ.

## ಕೊನೆಟಿಪ್ಪಣಿಗಳು

೧. ಕನ್ನಡ ಕಾದಂಬರಿ ಸಾಹಿತ್ಯ ಸಮೀಕ್ಷೆ – ವಿವಿಧ ಲೇಖಕರು, ಕನ್ನಡ ಸಾಹಿತ್ಯ ಸಂಘ, ಮೈಸೂರು, ೧೯೮೭, ಪು. ೧೩೦, ೧೩೧, ೧೩೩, ೧೩೪.

೨. ಕನ್ನಡ ಸಾಹಿತ್ಯಕೋಶ – ರಾಜಪ್ಪ ದಳವಾಯಿ, ದಳವಾಯಿ ಪ್ರಕಾಶನ, ಬೆಂಗಳೂರು, ಪು. ೬೨.

# ಅಧ್ಯಾಯ – ೪

# ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದ

ಭಾರತೀಯ ಸಾಹಿತ್ಯ ಕ್ಷೇತ್ರದಲ್ಲಿ ಕಳೆದ ಒಂದು ದಶಕದಿಂದೀಚೆಗೆ ಸ್ತ್ರೀವಾದ ಮತ್ತು ಸ್ತ್ರೀವಾದಿ ವಿಮರ್ಶೆ ಎಂಬ ಪದಗಳ ವಿಸ್ತೃತ ಬಳಕೆ ಆಗುತ್ತಲಿದೆ. ಇದು ಸಂತೋಷದ ಸಂಗತಿ. ಸ್ತ್ರೀವಾದಿ ಚಳುವಳಿ ಅಥವಾ ಮಹಿಳಾ ವಿಮೋಚನಾ ಚಳುವಳಿ ಜಾಗತಿಕ ಸ್ವರೂಪದ್ದು ಅಂತೆಯೇ ಸ್ತ್ರೀವಾದೀ ವಿಮರ್ಶೆಯೂ ಸಹ.

"ಸ್ತ್ರೀವಾದ" ಎಂಬ ಪದವು ಇಂಗ್ಲಿಷಿನಲ್ಲಿ ಬಳಸಲಾಗುವ 'ಫೆಮಿನಿಸಂ' [Feminism] ಅರ್ಥವನ್ನು ಸರಿಯಾಗಿ ಧ್ವನಿಸುವುದಿಲ್ಲ. ಆದ್ದರಿಂದ ಕಮ್ಯುನಿಸಂ ಪದವನ್ನು ಹೇಗೆ ಕನ್ನಡವನ್ನಾಗಿ ಮಾಡಿಕೊಂಡಿರುವೆವೋ ಹಾಗೆಯೇ ಫೆಮಿನಿಜಮ್‌ನ್ನು ಮಾಡಿಕೊಳ್ಳುವುದು ಒಳಿತು ಎಂದೆನಿಸುತ್ತದೆ.

೧೯ನೇ ಶತಮಾನದ ಮಧ್ಯದಲ್ಲಿ ಪ್ರಾರಂಭವಾದ ಔದ್ಯೋಗಿಕ ಕ್ರಾಂತಿ ಇಂಗ್ಲೆಂಡ್ ಮತ್ತು ಯುರೋಪ್ ದೇಶಗಳನ್ನು ಆರ್ಥಿಕ ಪ್ರಗತಿಯೆಡೆಗೆ ಒಯ್ದಿದ್ದೇನೋ ನಿಜ. ಆದರೆ ಸಂಪತ್ತಿನ ಜೊತೆಗೆ ಅದು ಶೋಷಣೆಯ ಶಾಪವನ್ನೂ ತನ್ನ ಮಡಿಲಲ್ಲಿ ಕಟ್ಟಿಕೊಂಡಿತ್ತು. ಶೋಷಣೆಯ ವಿರುದ್ಧ ಶೋಷಿತರು ಬಂಡೆದ್ದರು. ಮನುಷ್ಯ ಒಂದು ಯಂತ್ರವಲ್ಲ ಆತ ಮಾನವ ಪ್ರತಿ ಮಾನವನನ್ನು ಮಾನವನೆಂದೇ ಗೌರವಿಸಬೇಕು ಎಂಬ ಉದಾರವಾದ ಮಾನವತಾವಾದ ಪ್ರಾರಂಭವಾಯಿತು. ಅದರ ಸೆರಗನ್ನು ಹಿಡಿದುಕೊಂಡೇ ಪ್ರಾರಂಭವಾದ ಸ್ತ್ರೀವಾದವೂ ಪ್ರತಿಪಾದಿಸಿದ್ದು ಒಂದು ರೀತಿಯಲ್ಲಿ ಈ ಉದಾರ ಮಾನವತಾವಾದವನ್ನೇ ಮಹಿಳೆ ಶ್ರೀಮಂತ ವರ್ಗಕ್ಕೆ ಸೇರಿರಲಿ ಅಥವಾ ಬಡವರ್ಗಕ್ಕೆ ಸೇರಿರಲಿ ಕಲಿತಿರಲಿ ಅಥವಾ ಕಲಿಯದಿರಲಿ ಉಚ್ಚವರ್ಗಕ್ಕೆ ಸೇರಿರಲಿ ಅಥವಾ ಕೀಳುವರ್ಗಕ್ಕೆ ಸೇರಿರಲಿ ಆಕೆ ಪುರುಷ ಪ್ರಧಾನವಾದ ಸಮಾಜದಲ್ಲಿ ಕಾಲಾಂತರದಿಂದ ಶೋಷಣೆಗೆ ಒಳಗಾಗಿದ್ದಾಳೆ. ಹುಟ್ಟಿನಿಂದಲೇ ಆಕೆಯ ವಿಷಯದಲ್ಲಿ ತಾರತಮ್ಯ ಮಾಡಲಾಗುತ್ತಿದೆ. ಧರ್ಮದ ಹೆಸರಿನಲ್ಲಿ ಆಕೆಯನ್ನು ಅನೇಕ ರೀತಿಯಲ್ಲಿ ದಿಗ್ಬಂಧಿಸಲಾಗಿದೆ. ಮೇಲಾಗಿ ಮೂಢನಂಬಿಕೆಗಳು ಆಕೆಯನ್ನು ಜರ್ಜರಿತಳನ್ನಾಗಿ ಮಾಡಿವೆ. ಎಲ್ಲ ಅಧಿಕಾರ ಮತ್ತು ಸೌಲಭ್ಯಗಳನ್ನು ಪಡೆದ ಪುರುಷ ತನ್ನ ಕಾಮತೃಪ್ತಿಗಾಗಿ ಆಕೆಯನ್ನು ಶಾಶ್ವತವಾಗಿ ಪಂಜರದಲ್ಲಿ ಇಟ್ಟುಬಿಟ್ಟಿದ್ದಾನೆ. ಅವಳಿಗೆ ಇವೆಲ್ಲಗಳಿಂದ ವಿಮೋಚನೆ ಬೇಕಾಗಿತ್ತು. ಮಹಿಳಾ ವಿಮೋಚನಾ ಆಂದೋಲನ ಅರ್ಥಾತ್ ಸ್ತ್ರೀವಾದಿ ಆಂದೋಲನವು ಒಂದು ರೀತಿಯ ಬಂಡಾಯ ರೂಪವನ್ನೇ ತಾಳಿತು ಎಂದು ಹೇಳಬಹುದು.

ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಯಲ್ಲಿದ್ದ ಅಸಮಾನತೆ, ಅನ್ಯಾಯ, ಮೂಢನಂಬಿಕೆ ನಿರ್ದಿಷ್ಟಪಡಿಸಿದ ಪಾತ್ರ ಮುಂತಾದವುಗಳ ವಿರುದ್ಧ ಮಹಿಳೆ ಸಿಡಿದೆದ್ದುದು. ಈ ಆಂದೋಲನದ ಮೊದಲನೆಯ ಘಟ್ಟ. ಆಂದೋಲನದ ಸ್ವರೂಪ ಬೇರೆ ಬೇರೆ ದೇಶಗಳಲ್ಲಿ ಆಯಾ ದೇಶಗಳ ಸಾಮಾಜಿಕ ಪರಿಸ್ಥಿತಿ ಮತ್ತು ಸಂಸ್ಕೃತಿಗಳ ಪ್ರಕಾರ ಬೇರೆ ಬೇರೆ ರೂಪಗಳನ್ನು ತೆಗೆದುಕೊಂಡಿರುವುದು ನಿಜ. ಆದರೆ ಒಂದು ವಿಷಯದಲ್ಲಿ ಮಾತ್ರ ಅವೆಲ್ಲವುಗಳಲ್ಲಿ ಸಹಮತವಿತ್ತು. ಮಹಿಳೆ ಯಾವ ದೇಶದಲ್ಲಿಯೇ ಇರಲಿ ಆಕೆ ಶೋಷಿತಳೆ.

ಪ್ರಾರಂಭದಲ್ಲಿ ಸ್ತ್ರೀವಾದಿ ಚಳುವಳಿ ಪುರುಷ ವಿರೋಧಿ ರೂಪವನ್ನೇ ತಾಳಿದ್ದರಲ್ಲಿ ಆಶ್ಚರ್ಯವೇನಿಲ್ಲ. ಕಾರಣವೆಂದರೆ ಸಮಾಜದಲ್ಲಿ ಪ್ರತಿಷ್ಠಿತ ಸ್ಥಾನದಲ್ಲಿದ್ದ ಪುರುಷರೇ ತಮ್ಮ ಎಲ್ಲ ಕುಂದುಕೊರತೆಗಳಿಗೆ ದುಃಖದುಮ್ಮಾನಗಳಿಗೆ ಮತ್ತು ಶೋಷಣೆಗೆ ಜವಬ್ದಾರರೆಂದು ತಿಳಿದಿದ್ದರು. ಪುರುಷರಂತೆಯೇ ಸಮಾಜದಲ್ಲಿ ವ್ಯವಹರಿಸಬೇಕೆಂಬ ವಿಚಾರವನ್ನು ಮಹಿಳೆಯರು ಆಂದೋಲನದ ಒಂದು ಘಟ್ಟದಲ್ಲಿ ತಳೆದರು. ಒಂದು ಕಡೆಗೆ ಪುರುಷ ವಿರೋಧಿ ನೀತಿ ಇನ್ನೊಂದೆಡೆ ಆತನನ್ನೇ ಅನುಸರಿಸುವ ವಿಧಾನ. ಸ್ತ್ರೀವಾದಿ ಚಳುವಳಿ ಈ ತರಹದ ವಿರೋಧಾಭಾಸದಿಂದ ಕೂಡಿದ್ದರಿಂದ ಪುರುಷರು ಅದನ್ನು ನೋಡಿ ನಗೆಯಾಡಲು ಆಸ್ಪದ ಮಾಡಿಕೊಟ್ಟಿತು.

"ವಿಮೋಚನೆ ಮತ್ತು ಸ್ವಾತಂತ್ರ್ಯ" ಎಂದರೆ ಪುರುಷನನ್ನು ಅನುಕರಿಸುವುದು ಎಂಬ ವಿಚಾರ ಬೆಳೆದುಬಂತು. ಆದರೆ ಮಾರ್ಗರೇಟ್ ಪುಲ್ಲರ್ ಹೇಳಿದಂತೆ "ಆಕೆ ಸ್ವತಂತ್ರಳಾಗಿರಲು ಬಯಸಿದಳು". ಸ್ವತಂತ್ರಳೆಂದರೇನು? ಚಿತ್ರಾ ಘೋಷಳ ಮಾತಿನಲ್ಲಿ ಹೇಳುವುದಾದರೆ "ಅಸಹಜವಾದ ಮತ್ತು ನಿರರ್ಥಕವಾದ ಕಟ್ಟಳೆಗಳನ್ನು ತೆಗೆದುಹಾಕಿ ಪ್ರತಿಯೊಬ್ಬರು ಸಮಾಜವು ನೀಡುವ ಎಲ್ಲ ಸದಾವಕಾಶಗಳನ್ನು ಸರಿಯಾಗಿ ಯಾವ ನಿರ್ಬಂಧವಿಲ್ಲದೆ ತಮ್ಮ ವ್ಯಕ್ತಿತ್ವದ ಬೆಳವಣಿಗೆಗೆ ಮತ್ತು ಅಭ್ಯುದಯಕ್ಕೆ ಉಪಯೋಗಿಸಿಕೊಳ್ಳುವುದು" ಎಂದಿದ್ದಾರೆ.

ಸ್ತ್ರೀವಾದಿ ಆಂದೋಲನವು ಪ್ರಾರಂಭವಾಗಲು ದೀರ್ಘವಾದ ಮಹಿಳಾ ಹೋರಾಟದ ಚರಿತ್ರೆ ಇದೆ. ಯುರೋಪ್ ಖಂಡದ ಜರ್ಮನಿ, ನೆದರ್‌ಲ್ಯಾಂಡ್ಸ್, ಫ್ರಾನ್ಸ್, ಇಟಲಿ, ಸ್ಕಾಂಡಿನೇವಿಯಾ ಮೊದಲಾದ ಅನೇಕ ದೇಶಗಳಲ್ಲಿ ಹಾಗೂ ಬ್ರಿಟನ್ ಮತ್ತು ಉತ್ತರ ಅಮೇರಿಕಾದ ಸಂಯುಕ್ತ ಸಂಸ್ಥಾನಗಳಲ್ಲಿ ಆಯಾ ದೇಶದ ಸಾಂಸ್ಕೃತಿಕ ಹಿನ್ನೆಲೆಗೆ ಅನುಗುಣವಾಗಿ ಮಹಿಳೆಯರ ಸ್ಥಾನಮಾನ ಮತ್ತು ಹಕ್ಕುಗಳಿಗಾಗಿ ಮಹಿಳೆಯರೆ ಹೋರಾಟ ಮಾಡುತ್ತಾ ಬಂದಿರುವ ಚರಿತ್ರೆ ಸುಮಾರು ಇನ್ನೂರು ವರ್ಷಗಳಷ್ಟು ದೀರ್ಘವಾದದ್ದು.

ಆದರೆ ಇಪ್ಪತ್ತನೆಯ ಶತಮಾನದ ಅರವತ್ತರ ಮತ್ತು ಎಪ್ಪತ್ತರ ದಶಕಗಳಲ್ಲಿ ಈ ದೇಶಗಳಲ್ಲಿ ತುಂಬಾ ವ್ಯಾಪಕವಾದ ಮಹಿಳಾ ಚಳುವಳಿಗಳು ನಡೆದವು.

ಸ್ತ್ರೀವಾದಿ ಆಂದೋಲನವು ಪ್ರಾರಂಭವಾಗಲು ಮುಖ್ಯ ಕಾರಣವೆಂದರೆ ಸಮಾಜದಲ್ಲಿ ಮಹಿಳೆಗೆ ಕೊಡಲ್ಪಟ್ಟ ಕೆಳದರ್ಜೆಯ ಸ್ಥಾನಮಾನಗಳ ವಿಷಯದಲ್ಲಿ ಆಕೆಗೆ ಹುಟ್ಟಿದ ಅಸಂತೋಷ. ಆಕೆ ಬಂಡೆದ್ದದ್ದು ದಬ್ಬಾಳಿಕೆ ಅನ್ಯಾಯ ಮತ್ತು ಅಸಮಾನತೆಯ ವಿರುದ್ಧ ಈ ಬಂಡಾಯ ಮತ್ತು ಹೋರಾಟಗಳ ಮುಖಾಂತರ ಆಕೆ ಬರುಬರುತ್ತ ತನ್ನಷ್ಟಕ್ಕೆ ತಾನೇ ತನ್ನನ್ನು ಕೇಳಿಕೊಳ್ಳತೊಡಗಿದ ಪ್ರಶ್ನೆಗಳೆಂದರೆ "ನಾನು ಯಾರು?" "ನನ್ನ ವ್ಯಕ್ತಿತ್ವ ಹೇಗಿರಬೇಕು?" ಮತ್ತು "ಅದನ್ನು ರೂಪಿಸಿಕೊಳ್ಳುವ ಬಗೆ ಹೇಗೆ?" "ಗೌರವವನ್ನು ಪಡೆಯುವುದು ಹೇಗೆ?" ಈ ಪ್ರಶ್ನೆಗಳ ಉತ್ತರಗಳೇ ಒಂದು ರೀತಿಯಲ್ಲಿ ಈ ಸ್ತ್ರೀವಾದಿ ಆಂದೋಲನದ ಗೊತ್ತು ಗುರಿಗಳಾದವೆಂದು ಸ್ಥೂಲವಾಗಿ ಹೇಳಬಹುದು. ಮಹಿಳೆಗೂ ಒಂದು ವ್ಯಕ್ತಿತ್ವವಿದೆ. ಅದನ್ನು ಆಕೆ ರೂಪಿಸಿಕೊಳ್ಳಲು ಸ್ವತಂತ್ರಳಾಗಿರಬೇಕು; ಸಮಾಜ ಆಕೆಯ ವ್ಯಕ್ತಿತ್ವವನ್ನು ಗುರುತಿಸಬೇಕು ಮತ್ತು ಗೌರವಿಸಬೇಕು ಸ್ತ್ರೀವಾದ ಇತಿಹಾಸದಲ್ಲಿ ಒಂದು ಮೈಲುಗಲ್ಲನ್ನೇ ಸ್ಥಾಪಿಸಿದ ಬೆಟಿಫ್ರಾಯಡ್‌ನ ಪುಸ್ತಕ "ದಿ ಫೆಮಿನೈನ್ ಮಿಸ್ಟಿಕ್" [The Feminine Mistigue]ದಲ್ಲಿ ಪ್ರಸ್ತಾಪಿಸಲ್ಪಟ್ಟದ್ದೂ ಈ ವಿಷಯವನ್ನೇ.

ಸ್ತ್ರೀವಾದಕ್ಕೆ ಪಶ್ಚಿಮ ದೇಶಗಳಲ್ಲಿ ತಳಪಾಯ ಕಟ್ಟಿದವರು ಈ ಮಹಿಳೆಯರು. ಆದರೆ ಅವರವರ ಕಾಲದಲ್ಲಿ ತುಂಬ ಪ್ರಭಾವ ಬೀರಿದ್ದ ಪುರುಷರ ಚಿಂತನೆಗಳೇ ಇವರ ಚಿಂತನೆಗಳಿಗೆ ಮುಖ್ಯ ಪ್ರೇರಣೆ ಎಂಬುದನ್ನು ಗಮನಿಸಬೇಕು. ಮೇರಿ ವುಲ್‌ಸ್ಟನ್‌ಕ್ರಾಫ್ಟ್ ರುಸೋನ ವಿಚಾರಗಳಿಂದ. ಸಿಮೋನ್‌ದ ಬೋವಾ ಸಾರ್ತ್ರ್, ಕಾರ್ಲ್‌ಮಾರ್ಕ್ಸ್ ಮತ್ತು ಫ್ರಾಯ್ಡ್‌ನ ತಾತ್ವಿಕ ಸಿದ್ಧಾಂತಗಳಿಂದ ತಮ್ಮ ಚಿಂತನೆಗಳಿಗೆ ಪ್ರೇರಣೆ ಪಡೆದದ್ದು ಇಂದು ಬೌದ್ಧಿಕ ಲೋಕದಲ್ಲೆಲ್ಲಾ ತಿಳಿದಿರುವ ಸಂಗತಿ ಕೇಟ್ ಮಿಲೆಟ್ಟಳ ಲಿಂಗ ರಾಜಕೀಯ ಸಿದ್ಧಾಂತದ ಹಿಂದೆ ಆ ಕಾಲದ ಅಮೆರಿಕದ ವಿಶ್ವವಿದ್ಯಾನಿಲಯಗಳಲ್ಲಿ ಗಾಢವಾಗಿದ್ದ "ನ್ಯೂಕ್ರಿಟಿಸಿಸಂ" ವಾದಿಗಳಾದ ಪುರುಷರ ಧೋರಣೆಗಳೇ ಪ್ರೇರಣೆಗಳಾಗಿದ್ದವು. ಆದರೆ ಒಂದು ಸಿದ್ದಾಂತವನ್ನು ಯಾರು ಮೊದಲು ಹುಟ್ಟುಹಾಕಿದರು. ಸ್ತ್ರೀಯರೂ, ಪುರುಷರೋ ಎಂಬುದಕ್ಕಿಂತಲೂ ಆ ಸಿದ್ಧಾಂತವನ್ನು ಯಾವುದಕ್ಕಾಗಿ ಬಳಸಿಕೊಳ್ಳಲಾಗುತ್ತಿದೆ ಎಂಬುದು ಹೆಚ್ಚು ಮಹತ್ವದ್ದು. ಆದ್ದರಿಂದ ಸ್ತ್ರೀನಿಷ್ಠ ನೆಲೆಯಿಂದ ಜಗತ್ತನ್ನು ಕುರಿತ ದಾರ್ಶನಿಕ, ಸಾಮಾಜಿಕ, ಆರ್ಥಿಕ ವಿಚಾರಗಳನ್ನು ಬೆಳೆಸಲು ತಮ್ಮ ಕಾಲದ ಪ್ರಭಾವಶಾಲಿ ತಾತ್ವಿಕ ವಿಚಾರಗಳನ್ನು ಬಳಸಿಕೊಂಡರೂ, ಹೊಸ ನೋಟವೊಂದನ್ನು ಕಲ್ಪಿಸಿದ್ದು ಈ ಮೊದಲ ಚಿಂತಕಿಯರ ಸಾಧನೆಯೆನ್ನಬಹುದು.

ಮಹಿಳೆಯರ ಸಾಹಿತ್ಯವೂ ಸಾಹಿತ್ಯವೇ. ಆದರೆ ಅದು ಭಿನ್ನವಾದದ್ದು, ಕೀಳು ಅಲ್ಲ ಎಂದು ಬಲವಾಗಿ ಪ್ರತಿಪಾದಿಸಿದವಳು ಜರ್ಮನಿ ಗ್ರೀಕ ಎಂಬುವಳು ತನ್ನ ಪುಸ್ತಕ "The Female Evnuch"ದಲ್ಲಿ.

ಮೇರಿ ಫರ್ಗುಸನ್ನಳ "ಇಮೇಜಸ್ ಆಫ್ ವಿಮೆನ್ ಇನ್ ಲಿಟರೇಚರ್" ಒಂದು ದಾಖಲಾತಿ ಕೃತಿ ಎಂದು ಹೇಳಬಹುದು. ಸಾಹಿತ್ಯದಲ್ಲಿ ಬೇರೆ ಬೇರೆ ರೀತಿಯಲ್ಲಿ ಚಿತ್ರಿಸಲಾದ ಸ್ತ್ರೀಪಾತ್ರಗಳ ಸಂಗ್ರಹ ಇಲ್ಲಿದೆ. ಈ ಚಿತ್ರಗಣಗಳೆಲ್ಲವೂ ಸಮಾಜ ಮಹಿಳೆಯರನ್ನು ಕಂಡ ದೃಷ್ಟಿಕೋನಗಳನ್ನೇ ಉದಾಹರಿಸುತ್ತವೆ. ಕೇಟ್‌ಮಿಲ್ಲೆಟಳು ತನ್ನ "Sexual Politics" ಎಂಬ ಪುಸ್ತಕದಲ್ಲಿ ನೊರಮನ್ ಮೇಯಲರ್ ಮತ್ತು ಹೆನ್ರಿ ಮಿಲ್ಲರ್ ಎಂಬ ಅಮೆರಿಕನ್ ಲೇಖಕರು ಮಹಿಳೆಯರ ವಿಷಯದಲ್ಲಿ ತಮಗಿರುವ ಭಯದ್ವೇಷಗಳನ್ನು ಹೇಗೆ ಆಕೆಯನ್ನು ಕೀಳಾಗಿ ಚಿತ್ರಿಸುವಲ್ಲಿ ವ್ಯಕ್ತಪಡಿಸಿದ್ದಾರೆ ಎಂಬುದನ್ನು ವಿಶ್ಲೇಷಿಸಿದ್ದಾಳೆ. ಸ್ತ್ರೀವಾದಿಗಳು ಪ್ರೇಮ ಎಂಬ ಬೂರ್ಜ್ವಾ ಮತ್ತು ರೋಮ್ಯಾಂಟಿಕ್ ವಿಚಾರವನ್ನೂ ಸ್ವೀಕರಿಸುವುದಿಲ್ಲ. ಅಂತೆಯೇ ಮಹಿಳೆ ಕಾಮದ ಸಂಕೇತವೆಂದು ಬರೆಯುವುದಕ್ಕೂ ಅವರ ತೀವ್ರ ವಿರೋಧವಿದೆ. ಮಹಿಳೆಯರು ತಮ್ಮನ್ನು ಹೇಗೆ ಗುರುತಿಸಿಕೊಳ್ಳಲು ಇಚ್ಛಿಸುತ್ತಾರೆ ಎಂಬುದನ್ನು ಪ್ಯಾಟ್ರಿಸಿಯಾ ಸ್ಯಾಕ್ಸಳ ಕೃತಿ "The Female Imagination"ದಲ್ಲಿ ಕಾಣಬಹುದು. ಎಲಿಸಿಯಾ ಬಸ್ರಿಕ್‌ಳು "Writing like a woman"ದಲ್ಲಿ ಬ್ರಿಟಿಷ್ ಮತ್ತು ಅಮೆರಿಕೆಯ ಐದು ಕವಯತ್ರಿಯರೆಂದರೆ – ಹಿಲ್ಡಾ ಡೂಲಿಟ್ಲ್, ಸಿಲವಿಯಾ ಪ್ಲಾಥ್, ಆ್ಯ ನ ಸೆಕ್ಸಟನ್, ಮೇ ಸ್ಟೆನ್‌ಸನ್ ಮತ್ತು ಆಡ್ರಿಯಾನಾ ರಿಚ್. ಈ ಕವಯತ್ರಿಯರನ್ನು ಆಕೆ ಧೀಮಂತ ಮಹಿಳೆಯರು ದಿಟ್ಟ ಲೇಖಕಿಯರು ಎಂದು ಕರೆದಳು. ಜ್ಯೂಲಿಯನ್ ಫ್ಲೀನರಳಿಂದ ಸಂಪಾದಿಸಲ್ಪಟ್ಟ "The Female Gothic"ದಲ್ಲಿ ಹದಿನಾರು ಲೇಖನಗಳಿವೆ. 'ಗೋಥಿಕ್' ಕಾದಂಬರಿಯನ್ನು ಹೊಸ ದೃಷ್ಟಿಕೋನದಿಂದ ಇಲ್ಲಿ ಅವಲೋಕಿಸಲಾಗಿದೆ.

ಸ್ತ್ರೀವಾದಿ ವಿಮರ್ಶೆ ಬರೀ ಪಾತ್ರಗಳ ಅಧ್ಯಯನಕ್ಕೆ ಸೀಮಿತಗೊಂಡರೆ ಸಾಲದು. ಅದಕ್ಕೆ ಒಂದು ಭದ್ರವಾದ ಸ್ಥಾನವು ಸಿಕ್ಕಬೇಕಾದರೆ ಅದೊಂದು ಸೈದ್ಧಾಂತಿಕ ನೆಲಗಟ್ಟನ್ನು ಹೊಂದಬೇಕು. ಆ ದಿಶೆಯಲ್ಲಿ ಪ್ರಯತ್ನ ಮಾಡಿದ್ದನ್ನು ಕೆನಡಾದ ಜರ್ನಲ್ "Critical Inquiry"ಯಲ್ಲಿ ಪ್ರಕಟವಾದ ಶೋವಾಲ್ಟರಳ "Feminist Criticism in the Wilderness" ಎಂಬ ಲೇಖನದಲ್ಲಿ ಕಾಣುತ್ತೇವೆ. ಈವರೆಗೆ ದಿಕ್ಕು-ದಿಶೆಯನ್ನದೆ ವಿವಿಧ ದಿಶೆಗಳಲ್ಲಿ ಹರಿದಾಡುತ್ತಿದ್ದ ಸ್ತ್ರೀವಾದಿ ವಿಮರ್ಶೆಯನ್ನು ಒಂದು ಚೌಕಟ್ಟಿನಲ್ಲಿ ತಂದು ಅದಕ್ಕೆ ಒಂದು Ideologyಯ ರೂಪ ಕೊಡುವ ಪ್ರಯತ್ನದಲ್ಲಿ ಮೊದಲನೆಯ ಹೆಜ್ಜೆ ಇದು. ಶೋವಾಲ್ಟರಳ

ಎರಡನೆಯ ಲೇಖನ "Towards a Feminist Poetics" ಸ್ತ್ರೀವಾದಿ ವಿಮರ್ಶೆ ತಮ್ಮ ದಿಸೆ ದಿಕ್ಕನ್ನು ಕಂಡುಕೊಳ್ಳುತ್ತಿದೆ ಎಂಬುದನ್ನು ಸೂಚಿಸುತ್ತದೆ.

ಸು. ೧೫೦೦ ವರ್ಷಗಳ ಇತಿಹಾಸವಿರುವ ಕನ್ನಡ ಸಾಹಿತ್ಯದ ಪ್ರಾರಂಭದ ಏಳೆಂಟು ಶತಮಾನಗಳು ಮಹಿಳೆಯ ಪಾಲಿಗೆ ಬರಡು ಭೂಮಿ. ಹತ್ತನೇ ಶತಮಾನದ ಅತ್ತಿಮಬ್ಬೆ ಸ್ವತಃ ಬರಹಗಾರ್ತಿಯಲ್ಲದಿದ್ದರೂ ಸಾಹಿತ್ಯಾಸಕ್ತಿ ವ್ಯಕ್ತಪಡಿಸಿದ ಮೊದಲ ಮಹಿಳೆಯಾಗಿದ್ದಾಳೆ. ಸಹಗಮನ ಮಾಡದೆ ಉಳಿದ ಶ್ರೀಮಂತ ವಿಧವೆ ತನ್ನ ಐಶ್ವರ್ಯವನ್ನು ಜೈನಧಾರ್ಮಿಕ ಕೃತಿ ಶಾಂತಿಪುರಾಣದ ಪ್ರಚಾರಕ್ಕೆ ವಿನಿಯೋಗಿಸಿದ್ದು ಹಾಗೂ ರನ್ನನ ಬರವಣಿಗೆಗೆ ಪ್ರೋತ್ಸಾಹ ನೀಡಿದ್ದು ಐತಿಹಾಸಿಕ ಸಂಗತಿಗಳಾಗಿವೆ. ಧಾರ್ಮಿಕ ಚೌಕಟ್ಟಿನ ಮಿತಿಯಲ್ಲಿ ಆಕೆಯ ಸಾಹಿತ್ಯಾಸಕ್ತಿ ಕನ್ನಡ ಮಹಿಳಾ ಚರಿತ್ರೆಯ ಮೊದಲ ದಾಖಲೆಯಾಗಿದೆ.

ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಹನ್ನೆರಡನೆಯ ಶತಮಾನದ ಬಸವಾದಿಯರ ಕಾರಣದಿಂದ ಮಹಿಳೆಯ ದನಿ ಸ್ಫುಟವಾಗಿ ಕೇಳಿಸತೊಡಗಿತು. ಇದಕ್ಕೆ ಮುಖ್ಯಕಾರಣ ಅರಿವಿಗೆ "ಲಿಂಗಭೇದವಿಲ್ಲ"ವೆಂಬ ಮಾತು. ಅಕ್ಕ ಮಹಾದೇವಿ ಕೈ ಹಿಡಿದ ಗಂಡನನ್ನು ನಿವಾರಿಸಿಕೊಳ್ಳುವ ದಿಟ್ಟತನಕ್ಕೆ ಕೈಹಚ್ಚಿದ್ದು ಕೌಶಿಕನನ್ನು ತೊರೆದು ಪುರುಷನಂತೆಯೇ ಸ್ತ್ರೀಯೂ ಏಕಾಂಗಿಯಾಗಿ ಕಾಡುಮೇಡುಗಳನ್ನು ಅಲೆದು ಸಾಧನೆ ಮಾಡಬಲ್ಲಳುಎಂಬುದನ್ನು ಸಾಧಿಸಿ ತೋರಿಸಿರುವುದರಲ್ಲಿ ಆಕೆಯ ಘನತೆಯಿದೆ. ವಚನಕಾರ್ತಿಯರ ನಂತರ ಕಾವ್ಯಶಾಸ್ತ್ರಗಳ ವಿಧಿವಿಧಾನಗಳನ್ನು ಶಾಸ್ತ್ರೀಯವಾಗಿ ಅಭ್ಯಾಸಮಾಡಿ ಕಾವ್ಯ ರಚಿಸಿರುವ ಮೊದಲ ಕವಯಿತ್ರಿ ಸಂಚಿ ಹೊನ್ನಮ್ಮ "ಹದಿಬದೆಯ ಧರ್ಮ" ದಂಥ ಅಮೂರ್ತ ವಿಚಾರವನ್ನು ಕಾವ್ಯ ಮಾಧ್ಯಮದಲ್ಲಿ ಮೂರ್ತಗೊಳಿಸಿರುವ ಮೊದಲ ಪ್ರಯತ್ನ "ಪೆಣ್ಣಪೆಣ್ಣೆಂದೇತಕೆ ಬೀಳುಗಳೆದರು ಕಣ್ಣ ಕಾಣದ ಗಾಲವಿರು" ಎನ್ನುವ ಅಭಿಪ್ರಾಯ ಆ ಕಾಲದ ದೃಷ್ಟಿಯಿಂದ ಪ್ರಗತಿಪರ ಎಂದೇ ಭಾವಿಸಬೇಕಾಗುತ್ತದೆ.

ಆಧುನಿಕ ಕನ್ನಡ ಸಾಹಿತ್ಯವನ್ನು ಗಮನಿಸಿದಾಗ ಎಪ್ಪತ್ತರ ದಶಕದಲ್ಲಿ ಕಾಣಿಸಿಕೊಂಡ ಲೇಖಕಿಯರು ಸ್ತ್ರೀವಾದ ಸ್ತ್ರೀಮುಕ್ತಿ ಚಳವಳಿಗಳಿಂದ ಪ್ರಭಾವಿತರಾಗಿ ಸಾಹಿತ್ಯದಲ್ಲಿ ಹೆಚ್ಚು ಸ್ವಂತಿಕೆ ಮತ್ತು ಅರಿವು ಮುಕ್ತ ಅಭಿವ್ಯಕ್ತಿಯನ್ನು ಕಾಣಬಹುದು. ಅದರಲ್ಲೂ ಇತ್ತೀಚಿನ ಮಹಿಳಾ ಕಾವ್ಯವು ಬಿಂಬಿಸುವ ಮಾದರಿ ಹೆಣ್ಣುಗಂಡುಗಳು ಇಬ್ಬರೂ ಸಮಾನ ನೆಲೆಯಲ್ಲಿ ಜೋಡಿಸಿಕೊಂಡ ಏಕರೂಪಿ ಘಟಕದ ಆದರ್ಶವೊಂದನ್ನು ಪ್ರತಿಬಿಂಬಿಸುತ್ತಾ, ಈ ಸಿದ್ಧಿಯ ಈಡೇರಿಕೆಗಾಗಿ ನಿರಂತರವಾದ ನಿರೀಕ್ಷೆ ಹಂಬಲಗಳನ್ನು ಸೂಚಿಸುತ್ತದೆ. ಸ್ತ್ರೀ-ಪುರುಷರನ್ನು ಸಮಾನ ಸಖಿ-ಸಖರಂತೆ ಕಲ್ಪಿಸಿಕೊಂಡ ಈ ಸಾಮಾಜಿಕ ಆದರ್ಶ ಮಹಿಳಾ ಬರಹದ್ದು ಮಾತ್ರವಲ್ಲ ಇಂಥ ಸಮಾನ ಸ್ತ್ರೀ-ಪುರುಷ ಸಂಬಂಧಗಳುಳ್ಳ ಪರ್ಯಾಯ ವ್ಯವಸ್ಥೆಯ

ಆಯಶವೇ ಸ್ತ್ರೀವಾದಿ ಚಿಂತನೆಗೂ ಪ್ರೇರಕವಾಗಿದೆ. ಕನ್ನಡ ಸಾಹಿತ್ಯದಲ್ಲಿ ತಿರುಮಲಾಂಬಾರಿಂದ ಪ್ರಾರಂಭವಾದ ಲೇಖಕಿಯರ ಬರೆಯುವಿಕೆ, ಅಭಿವ್ಯಕ್ತಿಸುವಿಕೆ ಕಾಲಕ್ರಮೇಣ ಸ್ತ್ರೀವಾದ ಅಲೆಯೊಂದಿಗೆ ತೇಲಿಬಂದಿತ್ತು. ಮೊದಲನೆ ಘಟ್ಟದಲ್ಲಿ ಬರುವ ಮಹಿಳೆಯೂ ಸ್ತ್ರೀ ಸಮಸ್ಯೆಗಳನ್ನು ಹೆಚ್ಚು ಚರ್ಚಿಸಲು ಅವಕಾಶವಿಲ್ಲದಂತೆ ಚೌಕಟ್ಟಿನ ಒಳಗೆ ಬರೆದರೆ ಎರಡನೆಯ ಘಟ್ಟದ ಲೇಖಕಿಯರು ಸ್ತ್ರೀ ಅಸ್ತಿತ್ವದ ಬಗೆಗೆ ಜಾಗೃತಿ ಮೂಡಿಸಿದ್ದರು. ಕ್ರಮೇಣ ಸ್ತ್ರೀವಾದಿ ನೆಲೆಯಲ್ಲೆ ಬರೆಯತೊಡಗಿದ ಕನ್ನಡದ ಲೇಖಕಿಯರೆಂದರೆ, ವೈದೇಹಿ, ಪ್ರತಿಭಾನಂದಕುಮಾರ, ಸಾರಾ ಅಬೂಬಕರ್, ಮಾಲತಿ ಪಟ್ಟಣಶೆಟ್ಟಿ, ನೇಮಿಚಂದ್ರ, ಮಿತ್ರಾವೆಂಕಟ್ರಾಜ್, ಎಚ್.ನಾಗವೇಣಿ ಎಚ್.ಎಸ್.ಶ್ರೀಮತಿ ಮುಂತಾದ ಲೇಖಕಿಯರು ಸ್ತ್ರೀವಾದ ನೆಲೆಯಲ್ಲಿ ತಮ್ಮ ಬರವಣಿಗೆಯನ್ನು ಮುಂದುವರಿಸುತ್ತಿದ್ದಾರೆ. ಅಂತಹವರ ಸಾಲಿಗೆ ಡಾ. ಎಂ.ಎಸ್.ವೇದಾರವರು ಸೇರುತ್ತಾರೆ. ಇವರ ಬರಹಗಳು ಕೂಡ ಸ್ತ್ರೀವಾದಿ ನೆಲೆಯಲ್ಲಿ ಮೂಡಿಬಂದಂತಹವುಗಳಾಗಿವೆ.

## ಕೊನೆಟಿಪ್ಪಣಿಗಳು

೧. ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ, ವಿವಿಧ ಲೇಖಕರು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪು. ೨, ೩, ೬, ೭.

೨. ಅದೇ, ಪು. ೧೪.

೩. ಸ್ತ್ರೀವಾದ, ಬಿ.ಎನ್.ಸುಮಿತ್ರಾಬಾಯಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪು. ೧.

# ಅಧ್ಯಾಯ –೫

# ಕಾದಂಬರಿಗಳಲ್ಲಿ ಸ್ತ್ರೀವಾದ ನೆಲೆಯ ವಿಶ್ಲೇಷಣೆ

ಡಾ.ಎಂ.ಎಸ್.ವೇದಾರವರ ಸೃಜನಶೀಲ ಬರಹಗಾರ್ತಿಯರಲ್ಲಿ ಒಬ್ಬರು. ಇವರು ಸ್ತ್ರೀವಾದಿ ನೆಲೆಯಲ್ಲಿ ಗುರುತಿಸಿಕೊಂಡಿರುವ, ಸ್ತ್ರೀವಾದಿ ನೆಲೆಯಲ್ಲಿ ತಮ್ಮ ಬರಹಗಳನ್ನು ಅಭಿವ್ಯಕ್ತಿಸುತ್ತಿದ್ದಾರೆ. ಅಂತಹ ಅಭಿವ್ಯಕ್ತಿಗಳಲ್ಲಿ ಕಾದಂಬರಿಯೂ ಒಂದಾಗಿದೆ. ಇವರು ಇದುವರೆವಿಗೂ ನಾಲ್ಕು ಕಾದಂಬರಿಗಳನ್ನು ಬರೆದಿದ್ದು ಒಂದೊಂದು ಕಾದಂಬರಿಯೂ ಒಂದೊಂದು ರೀತಿಯಲ್ಲಿ ಸ್ತ್ರೀಯನ್ನು ಚಿತ್ರಿಸಿದೆ. ಪೌರಾಣಿಕ, ಗ್ರಾಮೀಣ, ಐತಿಹಾಸಿಕ ಕ್ಷೇತ್ರಗಳಲ್ಲಿ ಕಾದಂಬರಿ ಬರೆದ ಕೀರ್ತಿ ಇವರದು. ಸ್ತ್ರೀ ಪಾತ್ರಗಳನ್ನು ತನ್ನ ಕಾಲದ ಸಂವೇದನೆಯ ಮೂಲಕ ಸ್ತ್ರೀಯರು ಅನುಭವಿಸುತ್ತಿರುವ ನೋವಿನ ಧ್ವನಿಯನ್ನು ಮಾನವೀಯ ನೆಲೆಗಟ್ಟಿನಲ್ಲಿ ಪ್ರಜ್ಞಾಪೂರ್ವಕವಾಗಿ ರೂಪಿಸಿದ್ದಾರೆ. ಇವರು ಬರೆದಿರುವ ಕಾದಂಬರಿಗಳೆಂದರೆ

ಅ) ಜಮೀನು

ಆ) ಜಯ

ಇ) ಕಪ್ಪು ಕಿವಿಯ ಬಿಳಿಯ ಕುದುರೆಗಳು

ಈ) ರಾಜ ಒಡೆಯರ್

ಈ ಎಲ್ಲಾ ಕಾದಂಬರಿಗಳನ್ನು ಅರ್ಥೈಸುವ ದೃಷ್ಟಿಯಿಂದ, ಸಮಗ್ರ ಅಧ್ಯಯನ ದೃಷ್ಟಿಯಿಂದ ಸ್ತ್ರೀವಾದಿ ನೆಲೆಯಲ್ಲಿ ಚಿಂತಿಸಲು ಪ್ರಯತ್ನಿಸಲಾಗಿದೆ. ಅದರಿಂದಾಗಿ ಈ ಕಾದಂಬರಿಗಳನ್ನು ಉಪಭಾಗಗಳಾಗಿ ವಿಭಾಗಿಸಲಾಗಿದೆ. ಅವುಗಳೆಂದರೆ

ಅ) ವಸ್ತು ಮತ್ತು ಸ್ವರೂಪ

ಆ) ಸನ್ನಿವೇಶ ನಿರ್ವಹಣೆ

ಇ) ಪಾತ್ರ ಪೋಷಣೆ

ಈ) ಅಭಿವ್ಯಕ್ತಿ/ಶೈಲಿ

**ಜಮೀನು**

**ವಸ್ತು ಮತ್ತು ಸ್ವರೂಪ:**

ಈ ಕಾದಂಬರಿಯೂ ಒಂದು ಅಚ್ಚ ಗ್ರಾಮೀಣ ಕಾದಂಬರಿಯಾಗಿದೆ. ವರ್ತಮಾನದಿಂದ ಭೂತಕಾಲಕ್ಕೆ ಸಾಗುವ ತಂತ್ರವನ್ನು ಹೊಂದಿರುವ ಕಾದಂಬರಿಯೂ ಕಾಳರಾತ್ರಿಯಿಂದ ಆರಂಭವಾಗುತ್ತದೆ. ಮನೆಯ ಜಗಲಿಯ ಮೇಲೆ ಕೂತು ಬೇರೆ ಬೇರೆ

ವಿಷಯಗಳ ಬಗೆಗೆ ಸಂವಾದವನ್ನು ಮಾಡುತ್ತಾ "ವಂದಾರ ಚುಕ್ಕಿ ಕಾಣಿಸಲ್ಲ ಮಳೆ ಬಂದದಂದ್ರೆ" ಪಕ್ಕಾ ರೈತನ ಮಗಳಾಗಿ ದೇವಮ್ಮ ಜಗುಲಿಯ ಮೆಲೆ ಕೂತು ಕತ್ತ ಮೇಲಕ್ಕೆತ್ತಿ ಹೇಳುತ್ತಿದ್ದರು 'ಮಳೆ ಬಂದ್ ಬುಟ್ರೆ ಭತ್ತುದ್ ಕುಯ್ಲಿಗೆ ಕಷ್ಟ ಆಗ್‌ಬುಡ್ತದ್ದಲ್ಲ ಈಗಿನ್ ಕಾಲುದ್ ಮಳೆಗೆ ಒಂದ್ ನಿರ್ದಿಷ್ಟತೆಯೆ ಇಲ್ಲ ಅದೂ ಮನುಷ್ಯರಂಗೆ ಆಡ್ತದೆ' ಎಂದು ನುಡಿದಿದ್ದರು. ಈ ಮಾತಿನಲ್ಲಿ ತಿಳಿಯುತ್ತದೆ ಜನರಿಂದ ತೊಂದರೆಯನ್ನು ಭೂತಕಾಲದಲ್ಲಿ ಅನುಭವಿಸಿದ್ದಾರೆ ಎಂದು

ಶಿವಪ್ಪ ಮತ್ತು ದೇವಮ್ಮ ಜಮೀನನ್ನು ಉಳಿಸಿಕೊಳ್ಳಲು ಪಡುವ ಕಷ್ಟವೇ ಕಾದಂಬರಿಯ ವಸ್ತುವಾಗಿದೆ. ಇದಕ್ಕಾಗಿ ಎಂತೆಂಥಹ ನಿಂದನೆಗಳನ್ನು, ಅವಮಾನಗಳನ್ನು ಅನುಭವಿಸುತ್ತಾರೆ. ಆದರೂ ಕೊನೆಗೆ ಜಮೀನನ್ನು ಉಳಿಸಿಕೊಳ್ಳದೇ ಹೋಗುವುದು ಇವರಿಗೆ ತೀವ್ರವಾದ ನೋಟವನ್ನು ಉಂಟುಮಾಡುತ್ತದೆ.

ಸಂಗಮಳ್ಳಿಯ ಮಾದಪ್ಪನವರಿಗೆ ನಾಲ್ಕು ಜನ ಹೆಣ್ಣು ಮಕ್ಕಳು ಚೆನ್ನಬಸವ್ವ, ಗೌರವ್ವ, ಗಂಗವ್ವ, ಚೆಂದವ್ವ ಇವರಲ್ಲಿ ತುಂಬಾ ಗಟ್ಟಿವಂತಿಕೆಯ ಮನಸ್ಸು, ಬುದ್ಧಿ ಅಲ್ಪಸ್ವಲ್ಪ ವಿದ್ಯೆ ತಿಳುವಳಿಕೆ, ಕಾನೂನು ವಿಷಯಗಳು ತಿಳಿದಿದ್ದವು. ಗಂಗವ್ವನನ್ನು ಬಿಟ್ಟು ಉಳಿದ ಮೂವರಿಗೂ ಮಕ್ಕಳಿದ್ದವು. ಮಕ್ಕಳಿಲ್ಲದ ಗಂಗವ್ವ ಅಕ್ಕ ಚೆನ್ನಬಸವ್ವನಿಂದ ಹನ್ನೆರಡು ದಿನದ ಮಗೂ ಶಿವೂನನ್ನು ದತ್ತು ತೆಗೆದುಕೊಂಡು ಸಾಕಿ ಸಲುಹಿದಳು. ಕಾಲ ಎಂದಿನಂತೆಯೇ ಇರಲಿಲ್ಲ ಅಕ್ಕ-ತಂಗಿಯರ ಸಂಸಾರಗಳು ಬೆಳೆದು, ಮಕ್ಕಳು ಬೆಳೆದು ಮೀಸೆ ಹೊತ್ತು ನಿಂತ ಸನ್ನಿವೇಶದಲ್ಲಿ ಇವರು ಆಸ್ತಿಯನ್ನು ಪಾಲು ಮಾಡಿಕೊಂಡರು ಎಲ್ಲ ಆಸ್ತಿಯೂ ಗಂಗವ್ವನ ಹೆಸರಿನಲ್ಲಿಯೇ ಇತ್ತು. ಅದರಿಂದ ಪಾಲಾದ ಅಕ್ಕ-ತಂಗಿಯರು ಚೆನ್ನಬಸವ್ವನಿಗೆ ಹೊಟೇಲು ಮನೆ, ಗಂಗವ್ವ ತಾನಿದ್ದ ಅಗ್ರಹಾರದ ಮನೆಯನ್ನು ಹೊಟೇಲನ್ನು ಇಟ್ಟುಕೊಂಡು ಮನೆಯಾಳ್ತನಕ್ಕೆ ಮದುವೆಯಾಗಿದ್ದ ಚಂದವ್ವನಿಗೆ ಹನ್ನೆರಡು ಕಂಬದ ಗಾರೆಹಚ್ಚಿನ ಹಟ್ಟಿ ಎಂಭತ್ತು ಎಕರೆ ಹೊಲ-ಗದ್ದೆಯನ್ನು ಬಿಟ್ಟುಕೊಟ್ಟಿದ್ದರು. ಆದರೆ ಶಿವೂವಿನ ಭವಿಷ್ಯದ ದೃಷ್ಟಿಯಿಂದ ಎಂಭತ್ತು ಎಕರೆ ಜಮೀನಿನಲ್ಲಿ ಹತ್ತು ಎಕರೆಯನ್ನು ಉಳಿಸಿಕೊಂಡು ಉಳಿದ ಜಮೀನನ್ನು ಚೆಂದವ್ವನಿಗೆ ನೀಡಲಾಯಿತು. ಇದರಿಂದ ಚೆಂದವ್ವನಿಗೆ ತುಂಬಾ ಬೇಸರ ಉಂಟಾಯಿತು. ಆದರೆ ಸ್ವಾಭಿಮಾನಿ ನಂಜುಂಡನನ್ನು ಮದುವೆಯಾದ ಗೌರವ್ವ ಯಾವ ತಂಟೆಗೂ ಬಂದಿರಲಿಲ್ಲ. ಯಾವ ಆಸ್ತಿಯಲ್ಲೂ ಪಾಲು ಕೇಳಲಿಲ್ಲ.

ಶಿವೂ ಯೌವನಕ್ಕೆ ಕಾಲಿರಿಸಿದಾಗ ಗಂಗವ್ವ ದೇವಮ್ಮನನ್ನು ತಂದು ಮದುವೆ ಮಾಡಿದರು. ನಾಲ್ಕು ಮಕ್ಕಳಾದ ಮೇಲೆ ಶಿವೂಗೆ ಜಮೀನು ಮಾಡಿಸುವ ಖಯಾಲಿನಿಂದಾಗಿ ತನ್ನ ಅವ್ವನಲ್ಲಿ ಪ್ರಸ್ತಾಪಿಸಿದಾಗ 'ನಿಂಗೇನ್ ತಲೆಗಿಲೆ ಕೆಟ್ಟದ್ದದಾ ಶಿವೂ ಓದಿದ್ದಾಯ್ತು,

ಬರ್ದಿದ್ದಾಯ್ತು, ಕೆಲಸಕ್ಕೂ ಸೇರಿದ್ದಾಯ್ತು ಜಮೀನ್ ಮಾಡಿಸ್ತಾನಂತೆ ಜಮೀನು ಹಳ್ಳಿಲಿ ಇರೋರೆಲ್ಲಾ ಪಟ್ಟಣಕ್ಕೆ ಬರ್ಬೇಕೊಂತಿದ್ರೆ ಇವುನ್ ಇಲ್ಲಿಂದ ಅಲ್ಲಿಗೆ ಹೋದಾನಂತೆ ಬುದ್ದಿಗಿದ್ದಿ ಇದ್ದಾದಾ ನಿಂಗೆ' ಎಂದು ಕಠಿಣವಾಗಿಯೇ ನುಡಿದಿದ್ದಳು. ಆದರೂ ಹಠಮಾಡಿ ಜಮೀನು ಮಾಡಲು ಅವ್ವನನ್ನು ಒಪ್ಪಿಸಿದನು. ಬೇರೆ ಬೇರೆ ಕಡೆ ಇದ್ದ ಜಮೀನನ್ನು ಒಂದುಗೂಡಿಸಲು ಯೋಚಿಸಿ ತಮಗಿದ್ದ ಐದೆಕ್ಕರೆ ಜಮೀನನ್ನು ಚೆಂದವ್ವನಿಗೆ ನೀಡಿ ಅವರ ಬಳಿ ಇರುವ ಮೂರೆಕ್ಕರೆ ಜಮೀನನ್ನು ಬದಲಾಯಿಸಿಕೊಳ್ಳಲು ಚೆಂದವ್ವನನ್ನು ಕೇಳಿದಾಗ 'ಕೊಡಲ್ಲ ಕಣೋ ಶಿವು ನಿಂದು ನಿಂಗೆ ಇರ್ಲಿ, ನಂದು ನಂಗೆ ಇರ್ಲಿ" ಎಂದು ಗಂಗವ್ವನ ಮಧ್ಯಸ್ಥಿಕೆಯಿಂದ ಇದು ಸಾಧ್ಯವಾಯಿತು. ಇದರಿಂದಾಗಿ ಕಾರಣೋಚಿತವಾಗಿಯೇ ದ್ವೇಷ ಬೆಳಸಿಕೊಂಡಿದ್ದಳು ಚೆಂದವ್ವ. ಆದರೂ ಮೂರೆಕ್ಕರೆ ಜಮೀನನ್ನು ಶಿವೂನಿಗೆ ನೀಡಿದಳು. ಆ ಮೂರೆಕೆರೆ ಜಮೀನಿನಿಂದಲೇ ಎಲ್ಲ ಕಥಾಂತರಗಳು ನಡೆದವು.

ಜಮೀನನ್ನು ಪಡೆದ ಖುಷಿಯಿಂದ ಶಿವಪ್ಪ ಆರಂಭವನ್ನು ಪ್ರಾರಂಭಿಸಿದನು. ಮೊದಲು ಜಮೀನನ್ನು ಸಮತಟ್ಟುಗೊಳಿಸಿ, ಪಂಪ್‌ಸೆಟ್ಟನ್ನು ಹಾಕಿಸಿದನು. ಇದಕ್ಕಾಗಿ ಹೆಂಡತಿಯ ಒಡವೆಯನ್ನು ಮಾರಿದನು, ಜಮೀನಿಗೆ ಕಾಲುವೆಯನ್ನು ಬರುವಂತೆ ಮಾಡಲು ಹಲವಾರು ವರ್ಷಗಳು ದಿನಕ್ಕೆ ಒಂದರಂತೆ ಅಧಿಕಾರಿಗಳಿಗೆ ಪತ್ರಗಳನ್ನು ಬರೆದು ಕೊನೆಗೆ ತನ್ನ ಜಮೀನಿಗೆ ಕಾಲುವೆ ಬರುವಂತೆ ಮಾಡಿದನು ಇದರಿಂದಾಗಿ ಕೋಪಗೊಂಡ ಪಕ್ಕದ ಜಮೀನಿನ ಅಂದಾನಪ್ಪ ಶಿವಪ್ಪನ ಮೇಲೆ ದ್ವೇಷವನ್ನು ಬೆಳೆಸಿಕೊಂಡನು. ಶಿವಪ್ಪನ ಜಮೀನಿನ ತನಕ ಬಂದ ಕಾಲುವೆ ಪಕ್ಕದಲ್ಲಿಯೇ ಇರುವ ನನ್ನ ಜಮೀನಿಗೆ ಬಾರದೆ ಇರುವುದು ಇವನ ದ್ವೇಷಕ್ಕೆ ಕಾರಣವಾಯಿತು. ಸ್ನೇಹದಿಂದ ತನ್ನ ಆಸೆಯನ್ನು ಈಡೇರಿಸಿಕೊಳ್ಳುವ ಸಲುವಾಗಿ ಶಿವಪ್ಪನಿಗೆ ಹತ್ತಿರವಾದನು. ತನ್ನ ಅಣ್ಣನ ಮಕ್ಕಳನ್ನೂ ಶಿವಪ್ಪನ ಜಮೀನಿನ ಕೆಲಸಕ್ಕೆ ಸೇರಿಸಿದ ನಂತರ ಮೂರೆಕ್ಕರೆ ಜಮೀನನ್ನು ಹುಡುಗರಿಬ್ಬರಿಗೆ ವಾರಕ್ಕೆ ಕೊಡಿ ಎಂದು ಕೇಳಿದ್ದನು. ಅದಕ್ಕೆ ಒಪ್ಪಿಗೆಯನ್ನು ಶಿವಪ್ಪ ನೀಡಿದ್ದ. ಉಳುವವನೇ ಭೂಮಿಯ ಒಡೆಯ ಎಂಬ ಕಾನೂನಿನಿಂದ ಜಮೀನನ್ನು ಹುಡುಗರಿಗೆ ಕೊಡಿಸಿ ಅನಂತರ ತನ್ನ ಹೆಸರಿಗೆ ಮಾಡಿಕೊಳ್ಳುವ ಯೋಚನೆಯಲ್ಲಿದ್ದನು. ಈ ವಿಷಯ ತಿಳಿದ ಶಿವಪ್ಪ ದೇವಮ್ಮ ಆ ಹುಡುಗರನ್ನು ಕೆಲ್ಸದಿಂದ ತೆಗೆದು ಹಾಕಿದರು. ಕಾಲುವೆಯನ್ನು ಯಾರಿಗೂ ತಿಳಿಯದಂತೆ ರಾಮಣ್ಣನ ಸಹಾಯದಿಂದ ಮುಚ್ಚು ಹಾಕಿದರು. ಇದರಿಂದಾಗಿ ಹಲ್ಲು ಕಿತ್ತ ಹಾವಿನಂತಾದ ಅಂದಾನಪ್ಪ ಬಹಳ ಯೋಚಿಸಿ ಪಂಚಾಯ್ತಿಗೆ ದೂರನ್ನು ನೀಡಿದ್ದನು. ಎಷ್ಟೇ ಮಾತುಕತೆ ನ್ಯಾಯ ಪಂಚಾಯಿತಿ ಆದರೂ ಪುನಃ ಅಂದಾನಪ್ಪನಿಗೆ ಕಾಲುವೆ ತೋಡಲು ಶಿವಪ್ಪ ಒಪ್ಪಿಗೆ ನೀಡಲಿಲ್ಲ. ಊರಿನ ಹಿರಿಯರೆಲ್ಲರೂ ಸೇರಿ ಶಿವಪ್ಪನಿಗೆ ಕಟ್ಟು ಹಾಕಿದರು. ಕಟ್ಟು ಎಂದರೆ ನೀರು, ಬೆಂಕಿ, ಕೊಡ್ಡೆ ಬಹಿಷ್ಕಾರ ಹಾಕುವುದು ಎಂದರ್ಥ. ಅಲ್ಲದೇ ಶಿವಪ್ಪನ ಜಮೀನಿಗೆ ಕೂಲಿ ಕೆಲ್ಸಕ್ಕೆ ಯಾರೂ

ಹೋಗಬಾರದು ಹೋದರೆ ಅವರಿಗೂ ಕಟ್ಟು ಹಾಕುತ್ತಾರೆ ಎಂಬ ಊರಿನ ಹಿರಿಯರು ಹೇಳಿದರಿಂದ ಯಾವ ಆಳುಗಳು ಬರದಿದ್ದ ಕಾರಣ ಸೋಮೇಶ್ವರಪುರದಿಂದ ಆಳುಗಳನ್ನು ಕರೆಸಿ ನಾಟಿ ಮಾಡಿಸಲಾಯಿತು.

ಹುಡುಗರು ಹೋದ ಮೂರ್ನಾಲ್ಕು ತಿಂಗಳಲ್ಲೇ ಮಹಾದೇವಪ್ಪ ಜಮೀನಿಗೆ ಆಳಾಗಿ ಬಂದು ಶಿವಪ್ಪನ ಜಮೀನನ್ನು ಹಸುರಾಗಿಸತೊಡಗಿಸಿದ್ದರು. ಇದರಿಂದಾಗಿ ಇವರಿಬ್ಬರ ನಡುವೆ ಆತ್ಮೀಯತೆ ಉಂಟಾಗಿತ್ತು. ಕ್ರಮೇಣ ಜಮೀನಿನಲ್ಲಿ ನಡೆದ ಹಲವು ಘಟನೆಗಳ ನಂತರ ಅಂದಾನಪ್ಪನ ಒಡನಾಟ ಹೆಚ್ಚಾದಂತೆ ಮಾದೇವಪ್ಪನ ತಿಳುವಳಿಕೆಗಳು ಬೇರೆಯಾಗ-ತೊಡಗಿದ್ದವು. ಇದರಿಂದಾಗಿ ಮತ್ತೆ ಗಂಡಾಂತರಗಳನ್ನು ಎಳೆದುಕೊಳ್ಳಲು ಸಿದ್ಧರಾಗದೆ ಜಮೀನಿನ ಕೆಲಸದಿಂದ ತೆಗೆದು ಹಾಕಿದ್ದರು. ಹೀಗೆ ಆಳುಗಳ ಬರುವಿಕೆ ಹೋಗುವಿಕೆ ಹೀಗೆ ಸಾಗಿತ್ತು. ಇದರಿಂದ ಬೇಸತ್ತ ದಂಪತಿಗಳು ಮತ್ತೆ ಆಳುಗಳನ್ನು ಹುಡುಕುವ ಕಾರ್ಯಕ್ಕೆ ಹಾಕಲು ಹೋಗಿರಲಿಲ್ಲ.

ಶಿವಪ್ಪ - ದೇವಮ್ಮನವರೇ ಜಮೀನಿನಲ್ಲಿ ಇರಲು ಆರಂಭಿಸಿದಾಗ ನಾಯಿಯ ಅವಶ್ಯಕತೆ ಅವರಿಗೆ ಕಂಡುಬಂದಿತ್ತು. ಅಪ್ಪನ ಮಾತು ಕೇಳಿ ನಾಯಿಯನ್ನು ತಂದು ಸಾಕಿ ಜಮೀನಿಗೆ ಕಳುಹಿಸಿದರು. ಆದರೆ ನಾಯಿಗಳು ಆರು ತಿಂಗಳು, ವರ್ಷದಲ್ಲೇ ನಾಪತ್ತೆಯಾಗುತ್ತಿದ್ದವು ಅಥವಾ ಸತ್ತು ಹೋಗುತ್ತಿದ್ದವು. ಇದು ಅಂದಾನಪ್ಪನ ದ್ವೇಷದ ಕುರುಹು ಎಂದು ತಿಳಿದು ತಮ್ಮ ಜಮೀನಿನಲ್ಲಿ ನಾಯಿಗಳನ್ನು ಸಾಕುವುದನ್ನು ಬಿಟ್ಟರು. ಆದರೆ ಅಂದಾನಪ್ಪನವರ ಮನೆಯ ನಾಯಿ ಟಾಮಿ ದೇವಮ್ಮ-ಶಿವಪ್ಪರನ್ನು ಒಗ್ಗಿಕೊಂಡು ಅವರ ಜಮೀನು ಕಾಯುವ ಕೆಲಸಕ್ಕೆ ನಿಂತಿತು. ದೇವಮ್ಮ-ಶಿವಪ್ಪನವರು ಕೂಡ ಟಾಮಿಯನ್ನು ಪ್ರೀತಿಯಿಂದಲೇ ನೋಡಿಕೊಳ್ಳುತ್ತಿದ್ದರು. ಆದರೆ ಅಂದಾನಪ್ಪ ನಮ್ಮ ನಾಯಿ ಎಂದು ನೋಡದೆಯೇ ಕೊಂದು ಕಟ್ಟೆಗೆ ಎಸೆದಿದ್ದನು. ಅಲ್ಲಿಗೆ ನಾಯಿಯನ್ನು ಸಾಕುವುದಿರಲಿ ಅವನ್ನು ಪ್ರೀತಿಯಿಂದ ನೋಡುವ ನೋಟವನ್ನು ಬಂದ್ ಮಾಡಿದ್ದರು.

ಶಿವಪ್ಪರಿಗೆ ಖುಷಿಗಾಗಿ ಖಯಾಲಿಯಿಂದಾಗಿ ಬೇಸಾಯ ಮಾಡುವ ಷೋಕಿಗಾಗಿ ಆರಂಭವಾದ ಜಮೀನು, ಮನುಷ್ಯ ಸ್ವಭಾವದ ಪ್ರೀತಿ, ಪ್ರೇಮ, ದ್ವೇಷ, ಸಂಚು, ಹಠ, ಹೋರಾಟ, ಒಳಸಂಚು ಪ್ರತಿ ಪುಟಗಳನ್ನು ತೆರೆದು ತೆರೆದೂ ತೋರಿಸಿದ ಜಮೀನು, ನಗು-ಅಳು, ನೆಮ್ಮದಿ, ಆತಂಕ, ಧೈರ್ಯ, ಭಯ, ದಾರಿದ್ರ್ಯ, ಶ್ರೀಮಂತಿಕೆ ಎಲ್ಲ ವೈರುಧ್ಯಗಳನ್ನು ಏಕಕಾಲದಲ್ಲಿ ದಂಡಿ ದಂಡಿಯಾಗಿ ಬೊಗಸೆಯೊಡ್ಡಿ ನಿಂತ ಜಮೀನನನ್ನು ದ್ವೇಷಿಸಬೇಕೆಂದರೆ, ದ್ವೇಷಿಸಲಾಗದ ಪ್ರೀತಿಸಬೇಕೆಂದರೆ ಪ್ರೀತಿಸಲಾಗದ ಉಳಿಸಿಕೊಳ್ಳಬೇಕೆಂದರೆ, ಇಚ್ಛಿಸದೆ ಬಿಡಬೇಕೆಂದರೆ ದುಃಖ ಗುದ್ದಿಕೊಂಡು ಬರುವ ಜಮೀನು! ಆರುವ ದೀಪ ಜೊರಾಗಿ

ಉರಿಯುವಂತೆ ಮುಗಿಯುವ ಹಂತದ ಆತಂಕ ಅವರಿಬ್ಬರ ಮನದಲ್ಲಿ ಬಹಳ ದೊಡ್ಡದಾದ ಸ್ವರೂಪದಲ್ಲಿಯೇ ಆವರಿಸಿಕೊಂಡಿದೆ.

ಈ ಜಮೀನಿಗಾಗಿ ಏನೆಲ್ಲಾ ಮಾಡಿದೆ, ಎಷ್ಟೆಲ್ಲಾ ಪಾಡು ಪಟ್ಟೆ ನಾಲ್ಕು ಜನ ಬದುಕುವ ಹಾಗೆ ಬದುಕಲಿಲ್ಲ, ಸರಿಯಾಗಿ ಉಣಲಿಲ್ಲ, ಉಡಲಿಲ್ಲ, ಹೆಂಡತಿ-ಮಕ್ಕಳಿಗೆ ನೆಮ್ಮದಿ ಕೊಡಲಿಲ್ಲ ಆದರೆ ಅದನ್ನಾದರೂ ಉಳಿಸಿಕೊಂಡೆನಾ? ಅದೂ ಇಲ್ಲ. ಈ ಹನ್ನೆರಡು ವರ್ಷಗಳ ಅವಧಿ ಏನೆಲ್ಲಾ ಕೊಟ್ಟಿತು ಏನೆಲ್ಲಾ ಕಾಡಿಸಿತು' ಶಿವಪ್ಪನವರ ಮನ ಕೂಡಿ, ಕಳೆದು, ಗುಣಿಸುತ್ತಿತ್ತು. 'ಇದ್ಯಾಕ್ ಹಾಗ್ ಕುಂತುಬುಟ್ರಿ' ದೇವಮ್ಮ ತಮ್ಮ ಮನದ ಆತಂಕ, ದುಃಖಗಳನ್ನು ಎಂದಿನಂತೆಯೇ ಮರಸಿ ಕೇಳಿದ್ದರು. ಹನ್ನೆರಡು ವರ್ಷಗಳು ಹನ್ನೆರಡು ಯುಗಗಳೇ ಆಗಿಬಿಟ್ಟಿದ್ದವು. ಅದರಲ್ಲಿ ದೇವಮ್ಮ-ಶಿವಪ್ಪರ ಸೋಲಿತ್ತು, ಗೆಲುವಿತ್ತು, ನೋವಿತ್ತು, ನಲಿವಿತ್ತು, ಪ್ರೀತಿಯಿತ್ತು, ದ್ವೇಷವಿತ್ತು, ಭಯವಿತ್ತು, ಆತಂಕವಿತ್ತು, ಛಲವಿತ್ತು, ಒಲವಿತ್ತು ಮಾನವ ಪಡೆಯಬಹುದಾದ ಸಮಸ್ತ ಅನುಭವವೂ ಪ್ರಾಯಶಃ ಅದರಲ್ಲಿತ್ತು.

ಜಮೀನಿನಿಂದಾಗಿ ನೋವು, ಭಯ, ಆತಂಕ, ದ್ವೇಷ, ಇವೇ ಅನುಭವದಲ್ಲಿ ಹೆಚ್ಚಾಗಿದ್ದರಿಂದ ಜಮೀನನ್ನು ಮಾರಾಟ ಮಾಡಲು ಸಿಕ್ಕ ಸಿಕ್ಕವರ ಬಳಿ ಆಫೀಸಿನಲ್ಲಿ, ಸ್ನೇಹಿತರಲ್ಲಿ ಹೇಳಿದ್ದರು. ಮಕ್ಕಳ ವಿದ್ಯಾಭ್ಯಾಸಕ್ಕೆ ದೇವಮ್ಮನಿಗೆ ಕಷ್ಟ ಕೊಡಬಾರದು ಅಂತಾ ಮೈಸೂರಿನಲ್ಲಿ ನೆಮ್ಮದಿಯಿಂದ ಇರುವ ಉದ್ದೇಶದಿಂದಾಗಿ ಜಮೀನನ್ನು ಮಾರಾಟ ಮಾಡಲು ಹೊರಟರೇ ಅದನ್ನು ವಾಸ್ತವ ಸಂಗತಿಯಾಗಲು ಊರಿನವರೇ ಬಿಡುತ್ತಿರಲಿಲ್ಲ. ಒಂದಲ್ಲ ಒಂದು ಸುಳ್ಳು ಹೇಳಿ ಕಾಗ್ದ ಪತ್ರ ಸರಿಯಿಲ್ಲಾಂತ ಹೇಳಿ ಜಮೀನು ಮಾರಾಟವಾಗದ ತರಹ ಮಾಡುತ್ತಿದ್ದರು.

ಶಿವಪ್ಪನವರು ಆ ಜಮೀನನ್ನು ಮಾರಿದ. ಅದನ್ನು ಕೊಂಡ ಮೈಸೂರಿನ ಉದ್ಯಮಿ ಸಿದ್ದಪ್ಪರ ವಿಷಯ ಇನ್ನೇನೋ ಕೆಲವೇ ಘಂಟೆಗಳಲ್ಲಿ ಹನ್ನೆರಡು ವರ್ಷದ ಜಮೀನಿನ ಸಂಬಂಧವನ್ನು ಕಡಿದುಕೊಂಡು ಅವರು ಆ ಜಮೀನನ್ನು ಬಿಟ್ಟು ಹೊರಡುತ್ತಿರುವ ವಿಷಯ ಆ ಊರಿನ ಒಂದು ನರಪಿಳ್ಳೆಗೂ ಕೊನೆಗೆ ಪಕ್ಕದ ಜಮೀನಿನಲ್ಲಿಯೇ ಇರುವ ಅಂದಾನಪ್ಪನಿಗೂ ತಿಳಿಯದ ವಿಷಯವಾಗಿತ್ತು. ಜಮೀನು ಮಾರಾಟದ ವ್ಯವಹಾರ ಆ ರೀತಿ ಸಾಗಿತ್ತು. ದೇವಮ್ಮನಾಗಲಿ, ಶಿವಪ್ಪನಾಗಲಿ ಯಾರಿಗೂ ಅದನ್ನು ಬಾಯಿ ಬಿಟ್ಟಿರಲಿಲ್ಲ. ಸುಬ್ಬರಾಯಪ್ಪನವರು ಸಿದ್ದಪ್ಪನವರ ಬಳಿಗೆ ಬಂದು ಜಮೀನು ಪತ್ರಗಳು ತಕರಾರಿನದ್ದು ಅದನ್ನು ಕೊಂಡುಕೊಳ್ಳದಂತೆ ಶಂಖ ಊದಿದರೂ ಹಣ ಬಲವಿದ್ದ ಅವರು ಏನೂ ತೊಂದರೆ ಬಂದರೂ ಎದುರಿಸಲು ಸಿದ್ಧರಾಗಿ ಜಮೀನು ಕೊಂಡುಕೊಳ್ಳಲು ಮುಂದಾದರು. ಈ ಎಲ್ಲಾ ಕಾರಣದಿಂದ ಊರಿಗೆ ವಿಷಯ ತಿಳಿಸಿರಲಿಲ್ಲ.

ಜಮೀನು ಬಿಟ್ಟು ಹೊರಡುವ ಸಮಯ ಹತ್ತಿರವಾದಂತೆ ಅವರಿಬ್ಬರ ನಡುವಣ ಏಕ ಸ್ವರೂಪಿಯಾದ ಭಾವನೆಗಳ ತಾಕಲಾಟ ತೀವ್ರವಾಗತೊಡಗಿತ್ತು. ಭಾವನೆಗಳಿಗೆ ಅಷ್ಟಾಗಿ ಬಲಿ ಬೀಳದ ದೇವಮ್ಮ ಸಹ ನೋವಿನ ಅಲೆಯಲ್ಲಿ ಬಿದ್ದು ಏಳತೊಡಗಿದ್ದರು. ಆದರೂ ದೇವಮ್ಮ ನಗುತ್ತಾ ಭೂಮಿ ಪೂಜೆ ಮಾಡಿ ಮುಗಿಸಿ ಜಮೀನಿನ ಸುಪರ್ದನ್ನು ಸಿದ್ದಯ್ಯನವರಿಗೆ ಒಪ್ಪಿಸಿದ್ದಳು. "ಈ ಭೂಮಿತಾಯಿ ನಮ್ಮನ್ನು ಹೇಗೆ ನಡೆಸಿಕೊಂಡಳೋ ನಿಮ್ಮನ್ನು ಹಾಗೇ ನಡೆಸಿಕೊಳ್ಳಲಿ, ಅವಳೆಂದೂ ನಮ್ಮ ಕೈಯನ್ನು ಬಿಡಲಿಲ್ಲ ನಾವೇ ಇಂದು ಅವಳ ಕೈಬಿಟ್ಟು ಹೋಗ್ತಾ ಇದ್ದೀವಿ ನಂಬಿದೋರಿಗೆ ಯಾವತ್ತೂ ಅವ್ಳು ಮೋಸ ಮಾಡಲ್ಲ ಸಿದ್ದಯ್ಯನೋರೆ" ಎಂದು ನುಡಿದು ಜಮೀನಿನಿಂದ ಹೊರ ಬಂದುಬಿಟ್ಟರು ಗಂಡಹೆಂಡತಿಯರು. ನಿರ್ಜನವಾದ ಹಾದಿಯಲ್ಲಿ ನೀರವವಾಗಿ ಹೆಜ್ಜೆ ಹಾಕತೊಡಗಿದ್ದರು. ಒಂದಷ್ಟು ದೂರ ಬರುತ್ತಿದ್ದಂತೆಯೇ ನೇಗಿಲನ್ನು ಹೊತ್ತು ಹೊರಟಿದ್ದ ಮರಿಯಪ್ಪ ಹಾಗೆಯೇ ನಿಂತಿದ್ದ 'ಏನಳಿ ಮೈಸೂರ್ಗಾ? ಇಬ್ರೂವಟ್ಗೇ ವಂಟ್‌ಬುಟ್ಟಿದರಿ ಜಮೀನ್‌ತಾವ ಹಾರಿದ್ದರಳಿ' ನಗುತ್ತಾ ವಿಚಾರಿಸಿದ್ದ, ಇನ್ನೆಲ್ಲಿ ಜಮೀನು ಮರಿಯಪ್ಪ ಮಾರಿಬಿಟ್ವೊ' ಪೆಚ್ಚು ನಗೆ ನಗುತ್ತಾ ಕೇಳಿದ್ದ, ಇರದ್ನೆ ಹೇಳ್ತಾ ಇದ್ದೀನಿ, ಇವೊತ್ತು ಅವ್ರಿಗೆ ಜಮೀನ್ ಒಪ್ಪಿಸಿ ಹೋಗ್ತಾ ಇದ್ದೀವಿ' ದೇವಮ್ಮ ಗಂಭೀರದಲ್ಲಿ, ದಿಟದ ಮಾತು ಅರಿವಾದದ್ದೆ ಮರಿಯಪ್ಪನ ಕಂಗಳು ಅವನಿಗೆ ಅರಿವಿಲ್ಲದಂತೆಯೇ ನೀರಾಡಿದ್ದವು. ಸ್ವಲ್ಪ ಮುಂದೆ ಕ್ರಮಿಸಿ 'ಮರಿಯಪ್ಪ ಹೋಗಿ ವೂರಿಗೆ ವಿಷ್ಯ ತಿಳಿಸಿರ್ತಾನೆ ಕಣಂದ್ರೆ' ಗಂಡನೊಡನೆ ನುಡಿದರು. ತಿಳಿಸ್ಲಿ ಬುಡು ತಿಳ್ಕಂಡು ಏನ್ ಮಾಡ್ಕಳ್ ಹಂಗಿದ್ದಾರೆ ಇನ್ನೂ ನಾವೆಲ್ಲೋ ಅವ್ರೆಲ್ಲೋ, ಇಲ್ಲಿಗೆ ಇವತ್ಗೆ ಈ ಹಳ್ಳಿ ಋಣ ಮುಗೀತು. ಈ ದಿಕ್ಕುಗೆ ಇನ್ನು ತಲೆ ಇಟ್ಟು ಮಲಗಬಾರ್ದುಂತ ಅನ್ನಿಸಿಬಿಟ್ಟಿದೆ. 'ಇಲ್ಲಿರೋರೆ ಬಾಳ್ಲಿ ಬದುಕ್ಲಿ' ಶಿವಪ್ಪ ನಿರ್ಲಿಪ್ತರಾಗಿ ನುಡಿದು ತಮ್ಮ ಪಯಣ ಮುಂದುವರೆಸಿದರು.

ಹೀಗೆ ಊರಿನವರ ದ್ವೇಷ ಮೈ ತುಂಬಾ ಸಾಲ, ಮಕ್ಕಳ ವಿದ್ಯಾಭ್ಯಾಸದ ಕಾರಣಕ್ಕಾಗಿ ಒಲ್ಲದ ಮನಸ್ಸಿನಿಂದಲೇ ಜಮೀನನ್ನು ಮಾರಾಟ ಮಾಡಿ ಹೊರಟು ಹೋಗುವ ಮೂಲಕ ಕಾದಂಬರಿ ಮುಕ್ತಾಯವಾಗುತ್ತದೆ.

**ಜಮೀನು**

**ಸನ್ನಿವೇಶ ನಿರ್ವಹಣೆ:**

ಇದೊಂದು ಗ್ರಾಮೀಣ ಪರಿಸರದ ಕಾದಂಬರಿಯಾಗಿದ್ದು, ಹಳ್ಳಿಯ ಜನ ಜೀವನ ಕೃಷಿ, ಭೂಮಿಯೊಂದಿಗೆ ಸಂಬಂಧವಿರುವ ಕಾದಂಬರಿಯಾಗಿದೆ. ಈ ಕಾದಂಬರಿಯಲ್ಲಿ ಒಂದೆರಡು ಸನ್ನಿವೇಶಗಳು ಬಿಟ್ಟರೆ ಉಳಿದಂತೆ ಕಾದಂಬರಿಯೂ ಸರಾಗವಾಗಿ ಸಾಗುತ್ತದೆ. ಈ ಕಾದಂಬರಿಯಲ್ಲಿ ಶಿವಪ್ಪನು ಕಾಲುವೆಯನ್ನು ತೊಡಿಸಿದ ಮೇಲೆ ಅಂದಾನಪ್ಪನಿಂದ ಆದ

ಮೋಸ ಒಂದು ಸಂದರ್ಭವಾದರೆ, ಜಮೀನನ್ನು ಮಾರಾಟ ಮಾಡಿ ಹೋಗುವುದು, ಗಂಗವ್ವ ಶಿವೂನನ್ನು ದತ್ತು ತೆಗೆದುಕೊಂಡಿದ್ದ. ಇವೇ ಈ ಕಾದಂಬರಿಯಲ್ಲಿ ಸನ್ನಿವೇಶ ನಿರ್ವಹಿಸಿರುವ ಲೇಖಕಿಯ ಜಾಣ್ಮೆ ತಿಳಿಯಲು ಸಾಧ್ಯವಾಗುತ್ತದೆ.

ಗಂಗವ್ವ ಮಕ್ಕಳಿಲ್ಲದ್ದರಿಂದ ತನ್ನ ಅಕ್ಕ ಚೆನ್ನಬಸವನಿಂದ ಹನ್ನೆರಡು ದಿನದ ಕೂಸನ್ನು ಮಡಿಲಿಗೆ ಹಾಕಿಸಿಕೊಂಡಳು. ಇದರಿಂದಾಗಿ ಜಮೀನನ್ನು ತನ್ನ ತಂಗಿ ಚೆಂದವ್ವನಿಗೆ ಕೊಡುವ ಹೊತ್ತಿನಲ್ಲಿ ಹಿರೀಕನಾದ ಮಹಾಂತಪ್ಪ "ಎಲ್ಲರಿಗೂ ಅದು ಕೊಟ್ಟೆ, ಇದುಕೊಟ್ಟೆ, ನಿಂಗೂ ಒಂದ್ ಕುಡಿ ಅದೆ, ಅದಕ್ಕೇನೂ ಬ್ಯಾಡವೋ" ಎಂದು ಹೇಳಲಾಗಿ ಶಿವೂಗಾಗಿ ಹತ್ತು ಎಕರೆ ಜಮೀನನ್ನು ಉಳಿಸಿಕೊಳ್ಳುವ ಮನಸ್ಸು ಮಾಡಿದ್ದಳು. ಈ ಜಮೀನಿನಿಂದಾಗಿಯೇ ಇಡೀ ಕಾದಂಬರಿ ಅನಾವರಣಗೊಳ್ಳುತ್ತದೆ. ಇದೇ ಈ ಸನ್ನಿವೇಶವೇ ಕಾದಂಬರಿಯ ಮುಖ್ಯ ತಿರುವು.

ಎರಡನೆಯದಾಗಿ ಜಮೀನಿಗಾಗಿ ಕಾಲುವೆಯನ್ನು ತೋಡಿಸಿದಾಗ ಎದುರಿನ ಜಮೀನಿನ ಅಂದಾನಪ್ಪನ ವಿರೋಧವನ್ನು ಕಟ್ಟಿಕೊಳ್ಳಬೇಕಾಗುತ್ತದೆ. ಶಿವಪ್ಪನ ಜಮೀನಿನವರೆಗೂ ಬಂದ ಕಾಲುವೆ ಪಕ್ಕದಲ್ಲಿಯೇ ಇರುವ ತನ್ನ ಜಮೀನಿಗೆ ಬಾರದೇ ಇರುವುದೇ ಇದಕ್ಕೆ ಕಾರಣವಾಗುತ್ತದೆ.

ಅಂದಾನಪ್ಪ ತನ್ನ ಹಿತದ ನುಡಿಯೊಂದಿಗೆ ಶಿವಪ್ಪನಿಗೆ ಹತ್ತಿರವಾಗಿ ಅಣ್ಣನ ಮಕ್ಕಳನ್ನು ಶಿವಪ್ಪನ ಜಮೀನು ಕಾಯಲು ಸೇರಿಸಿ, ಮೂರೆಕೆರೆ ಜಮೀನನ್ನು ವಾರಕ್ಕೆ ಕೊಡುವಂತೆ ಮಾಡಿದ ನಂತರ ಉಳುವವನೇ ಭೂಮಿಯ ಒಡೆಯ ಎಂಬ ಕಾನೂನಿನಿಂದ ಹುಡುಗರ ಹೆಸರಿಗೆ ಜಮೀನನ್ನು ಮಾಡಿಸಿ ಅನಂತರ ತನ್ನ ಹೆಸರಿಗೆ ಬದಲಾಯಿಸಿಕೊಳ್ಳಲು ನಿರ್ಧರಿಸಿದ್ದನು. ಜೊತೆಗೆ ಶಿವಪ್ಪನ ಜಮೀನಿನಿಂದ ಕಾಲುವೆ ತೋಡಿ ತನ್ನ ಜಮೀನಿಗೆ ನೀರು ಬಿಡುವ ಕೆಲಸವನ್ನು ಮಾಡಿದನು. ಇದನ್ನು ತಿಳಿದ ಶಿವಪ್ಪ, ದೇವಮ್ಮ ಅಂದಾನಪ್ಪ ಇಲ್ಲದೆ ಇರುವುದನ್ನು ಗಮನಿಸಿ ಹುಡುಗರನ್ನು ಕೆಲಸದಿಂದ ತೆಗೆದು ಹಾಕಿ, ರಾಮಣ್ಣನ ಸಹಾಯದಿಂದ ಮನೆ ಮುಂದೆ ಅಂದಾನಪ್ಪ ತೋಡಿದ ಕಾಲುವೆಯನ್ನು ಮುಚ್ಚಿಬಿಟ್ಟರು. ಇದರಿಂದಾಗಿ ಶಿವಪ್ಪ ಅಂದಾನಪ್ಪ, ಊರಿನವರ ದ್ವೇಷಕ್ಕೆ ಗುರಿಯಾಗಿ ಕಟ್ಟನ್ನು (ಬಹಿಷ್ಕಾರ) ಅನುಭವಿಸಬೇಕಾಯಿತು. ಇದು ಕೂಡ ಕಾದಂಬರಿ ಮುಂದುವರಿಯಲು ಬೇರೆ ರೀತಿಯ ತಿರುವನ್ನು ನೀಡಿದ ಸನ್ನಿವೇಶವಾಗಿದೆ.

ಕೊನೆಯದಾಗಿ ಶಿವಪ್ಪ ಮತ್ತು ದೇವಮ್ಮ ಯಾರಿಗೂ ಸುಳಿವು ನೀಡದೆ ಜಮೀನನ್ನು ಮಾರಿದ್ದು, ಊರಿನವರ ದ್ವೇಷ, ಸಾಲದ ಕಾಟ, ಮಕ್ಕಳ ವಿದ್ಯಾಭ್ಯಾಸಕ್ಕಾಗಿ, ಮದುವೆಗಾಗಿ ಜಮೀನು ಮಾರಲು ಮುಂದಾದರೆ ಆ ಊರಿನವರೆ ಜಮೀನು ಖರೀದಿಸಲು ಬಂದವರಿಗೆಲ್ಲಾ

ಕಾಗದ ಪತ್ರ ಸರಿಯಿಲ್ಲ ಎಂದು ಹೇಳಿ ಎಷ್ಟೋ ಖರೀದಿದಾರರನ್ನು ಹಾಗೆಯೇ ಕಳುಹಿಸಿದರು. ಇದರಿಂದ ಬೇಸರಗೊಂಡ ದೇವಮ್ಮ 'ಅಲ್ಲಾ ಇವ್ರಿಗೆ ನಾವೇನ್ ಅನ್ಯಾಯ ಮಾಡಿದ್ದೋಂತ ಇವ್ರು ನಮ್ಮ ಹೊಟ್ಟೆ ಹಿಂಗ್ ವುರಿಸ್ಕಂಡರೂ ಅಂತೀನಿ' ಎಂದು ನುಡಿಯುತ್ತಿದ್ದರು. ಆದ್ದರಿಂದಲೇ ಜಮೀನನ್ನು ಮೈಸೂರಿನ ಉದ್ಯಮಿ ಸಿದ್ದಪ್ಪರವರಿಗೆ ಮಾರಿದ ವಿಷಯವನ್ನು ಊರಿನ ನರಪಿಳ್ಳೆಗೂ ತಿಳಿಸಿರಲಿಲ್ಲ.

ಸುಬ್ಬರಾಯಪ್ಪ ಸಿದ್ದಪ್ಪನವರ ಒಳಗೆ ಹೋಗಿ ಜಮೀನುಪತ್ರಗಳು ಸರಿಯಿಲ್ಲ ಎಂಬಿತ್ಯಾದಿಯಾಗಿ ಶಂಖ ಊದಿ ಬಂದಿದ್ದರು. ಆದರೂ ಹಣಬಲವಿರುವ ಸಿದ್ದಪ್ಪ ಅವುಗಳನ್ನೆಲ್ಲ ಎದುರಿಸಲು ಸಿದ್ದರಾಗಿ ಜಮೀನನ್ನು ಖರೀದಿಸಿದರು. ಒಂದು ದಿನ ಜಮೀನನ್ನು ಸಿದ್ದಪ್ಪನಿಗೆ ವಹಿಸಿಕೊಟ್ಟು ದೇವಮ್ಮ-ಶಿವಪ್ಪ ಜಮೀನಿನಿಂದ ಹೋಗುತ್ತಿದ್ದುದನ್ನು ಗಮನಿಸಿದ ಮರಿಯಪ್ಪಾ' ಏನುಳಿ ಮೈಸೂರ್ಗಾ? ಇಬ್ರೂ ವಟ್ಗೇ ವಂಟ್ ಬುಟ್ಟಿದರಿ ಜಮೀನ್ ತಾವ ಯಾರಿದ್ದರಳಿ' ಎಂದು ಕೇಳಿದನ್ನು ಅದಕ್ಕೆ ದೇವಮ್ಮ "ಇನ್ನೆಲ್ಲಿ ಜಮೀನು ಮರಿಯಪ್ಪ ಮಾರಿಬಿಟ್ರೊ" ಎಂದು ಕೇಳಿದಾಗ ಮರಿಯಪ್ಪನ ಕಂಗಳು ಅವನಿಗೆ ಅರಿವಿಲ್ಲದಂತೆಯೇ ನೀರಾಡಿದ್ದವು ಇದು ಈ ಕಾದಂಬರಿ ಬಹು ಮುಖ್ಯ ತಿರುವು ಯಾರಿಗೂ ಸುಳಿವು ನೀಡದೆಯೇ ನಡೆಯುವ ಒಂದು ಅಚ್ಚರಿಯ ಸಂಗತಿಯಾಗಿ ಕಾದಂಬರಿಯಲ್ಲಿ ಅನಾವರಣಗೊಂಡಿದೆ.

**ಪಾತ್ರ ಪೋಷಣೆ:** ಒಟ್ಟು ಕಾದಂಬರಿಗಳನ್ನು ಅಭ್ಯಸಿಸಿದಾಗ, ಪಾತ್ರಗಳೇ ಕಾದಂಬರಿಗಳ ಆಧಾರ ಸ್ತಂಭವಾಗಿರುವುದು ಕಂಡುಬರುತ್ತದೆ ಆದಕಾರಣ ಪಾತ್ರಗಳನ್ನು ಅಧ್ಯಯನದ ದೃಷ್ಟಿಯಿಂದ ಪ್ರಧಾನ ಪಾತ್ರಗಳು ಪೂರಕಪಾತ್ರಗಳೆಂದು ವಿಭಾಗಿಸಲಾಗಿದೆ.

ಜಮೀನು ಕಾದಂಬರಿಯಲ್ಲಿಯೂ ಸಹ ಪ್ರಧಾನ ಮತ್ತು ಪೂರಕ ಪಾತ್ರಗಳನ್ನು ಕಾಣಬಹುದಾಗಿದೆ ದೇವಮ್ಮ, ಶಿವಪ್ಪ, ಪ್ರಧಾನ ಪಾತ್ರವಾದರೆ ಅಂದಾನಪ್ಪ, ಗಂಗವ್ವ, ರಾಮಣ್ಣ, ಚೆನ್ನಬಸವ ಪೂರಕಪಾತ್ರಗಳಾಗುತ್ತವೆ.

**ಪ್ರಧಾನ ಪಾತ್ರಗಳು:-**

**ದೇವಮ್ಮ:** ದೇವಮ್ಮ ಮಾದಪ್ಪನವರ ಮೊದಲ ಹೆಂಡತಿಯ ಮಗಳು. ಮಾದಪ್ಪನ ಕೋಪ, ತಾಪ, ಹಠಮಾರಿತನ, ಕೃಷ್ಣವತಾರಗಳಿಂದ ಹೆಂಡತಿ ಬಾವಿಗೆ ಬಿದ್ದು ಪ್ರಾಣ ನೀಗಿಕೊಂಡಿದ್ದಳು. ಅಜ್ಜಿಯ ಆಶ್ರಮದಲ್ಲಿ ಬೆಳೆದ ದೇವಮ್ಮನನ್ನು ಗಂಗವ್ವ ನೋಡಿ ಬಹಳವೇ ಮೆಚ್ಚಿ ತಮ್ಮ ಹದಿನಾರು ವರ್ಷದ ಮಗ ಶಿವೂಗೆ ಒಂಭತ್ತು ವರ್ಷದ ದೇವಮ್ಮನನ್ನು ಮದುವೆ ಮಾಡಿಕೊಂಡರು. ತನ್ನ ಕಲ್ಪನೆಯ ಹುಡುಗಿಗೂ, ಮದುವೆಯಾದ ಹುಡುಗಿಗೂ ಇರುವ ವ್ಯತ್ಯಾಸವನ್ನು ಕಂಡು ಹೆಂಡತಿಯ ಮೇಲೆ ಅಸಹನೆ, ಕೋಪಗಳನ್ನು ವ್ಯಕ್ತಿಪಡಿಸುತ್ತಿದ್ದ.

ಕ್ರಮೇಣ ಇವರು ಬದಲಾಗಿ ಪ್ರೀತಿ ಮಾಡಲು ಆರಂಭಿಸಿತು. ಆದರೆ ದೇವಮ್ಮ ಅತ್ತೆ ಕೈಕೆಳಗಿನ ಸೊಸೆಯಾಗಿ ಸಾಕಷ್ಟು ಪರಿಪಾಟಲುಗಳನ್ನೆಲ್ಲಾ ಅನುಭವಿಸಲೇಬೇಕಿತ್ತು. ಇದು ಗಂಗವ್ವ ಸಾಯುವವರೆಗೂ ಮುಂದುವರೆದಿತ್ತು.

ಶಿವಪ್ಪನವರ ಜಮೀನು ಮಾಡುವ ಖಯಾಲಿಯಿಂದಾಗಿ ದೇವಮ್ಮ ಜಮೀನಿಗೆ ಬರುವಂತಾಯಿತು. ದೇವಮ್ಮ ತನ್ನ ಗಂಡನಿಗೆ ಒದಗಬಹುದಾದ ಅನೇಕ ಕಷ್ಟಗಳಿಂದ ಪಾರುಮಾಡಿ ಇನ್ನಿಲ್ಲ ಎಂಬಂತೆ ಸಹಾಯಹಸ್ತ ನೀಡಿದವರು ದೇವಮ್ಮನವರ ಮಾತುಗಳಿಂದಲೇ ಅಂದಾನಪ್ಪ ತನ್ನ ಅಣ್ಣನ ಮಕ್ಕಳನ್ನು ಶಿವಪ್ಪನ ಜಮೀನಿನಲ್ಲಿ ಇರಿಸಿ ತನ್ನ ಕೆಲಸ ಮಾಡಲು ಹೊರಟಿದ್ದಾಗ ಅದಕ್ಕೆ ಪೂರ್ಣವಿರಾಮ ಹಾಕಿ ಹುಡುಗರನ್ನು ಜಮೀನಿನಿಂದ ಆಚೆ ಹಾಕಿದ್ದು ದೇವಮ್ಮನವರ ಬಾಯಿಯಿಂದಲೇ ಅಂದಾನಪ್ಪ ಮತ್ತೆ ಅವರ ಸ್ನೇಹಿತರಿಂದ ಹತ್ಯೆಗೊಳಗಾಗುವ ಸ್ಥಿತಿಯಲ್ಲಿದ್ದರು ಅದನ್ನೆಲ್ಲಾ ಮೆಟ್ಟಿ ನಿಂತು ಜಮೀನನ್ನು ಉಳಿಸಿಕೊಳ್ಳಲು ಹೋರಾಡಿದವರು. ಆಳುಗಳು ಸರಿಯಾದ ಸಮಯಕ್ಕೆ ಬಾರದೆ, ಕೆಲಸವನ್ನು ಮಾಡದೆ ಹೋದಾಗ ಜಮೀನಿನ ಕೆಲಸ ತಾವೇ ನಿಂತು ಮಾಡುತ್ತಿದ್ದರು. ಒಟ್ಟಾರೆಯಾಗಿ ಶಿವಪ್ಪರಿಗಿಂತ ದೇವಮ್ಮ ಗಟ್ಟಿಗಿತ್ತಿಯಾಗಿ ನೆರೆಹೊರೆಯ, ತಮ್ಮ ದಾಯಾದಿಗಳ ದ್ವೇಷದ ನಡುವೆಯೂ ಜಮೀನಿಗಾಗಿ, ಜಮೀನಿನ ಉಳಿವಿಗಾಗಿ ತನ್ನ ಗಂಡನಿಗೆ ಬೆನ್ನೆಲುಬಾಗಿ ನಿಂತವರೇ ದೇವಮ್ಮನವರು.

ಮೊದಲ ಇಪ್ಪತ್ತೈದು ವರ್ಷಗಳ ದಾಂಪತ್ಯದಲ್ಲಿ ಗಂಗವ್ವನ ಮರ್ಜಿನಲ್ಲಿ ಗಂಡ–ಹೆಂಡತಿಯರ ನಡುವೆ ಯಾವುದೇ ಆತ್ಮೀಯತೆ ಮೂಡಿರಲಿಲ್ಲ. ಆದರೆ ಜಮೀನು ಮಾಡುವ ವನವಾಸದಲ್ಲಿ ಇವರ ದಾಂಪತ್ಯ ಒಂದು ಹೊಸ ಆಯಾಮವನ್ನು ತಂದಿತ್ತು.

ಸಣ್ಣಪುಟ್ಟ ಕಾರಣಕ್ಕೂ ಹೆಬ್ಬೆಟ್ಟು ಎಂಬ ಹೀಯಾಳಿಕೆಗೆ ಒಳಗಾಗಿ ತಲೆಯ ಮೇಲೆ ಮೊಟಕುತ್ತಿದ್ದ ಶಿವಪ್ಪ. ಅವಳಿಂದಲೇ ಹಲವಾರು ಪಾಠಗಳನ್ನು ಕಲಿಯುವಂತಾಯಿತು.

ಅವಳು ಇಲ್ಲದಿದ್ರೆ ಜಮೀನಿನಿಂದ ಒಂದ್ ಕಾಸೂ ನನಗೆ ಬರ್ತದೆ ಅನ್ನೋ ನಂಬಿಕೆ ಇರಲಿಲ್ಲ. ಅದನ್ನೆಲ್ಲಾ ನಿಭಾಯಿಸಿ ಕೈಗೆ ಇಷ್ಟಾದ್ರೂ ದುಡ್ಡ ಬಂದ ಎಲ್ಲ ಬೆನಿಫಿಟ್ಟೂ ಅವಳಿಗೆ ಸೇರಬೇಕು. ಅವಳು ಜೊತೆ ಇಲ್ಲದಿದ್ರೆ ಮೂರು ಕಾಸ್ಗೋ ಆರ್ ಕಾಸ್ಗೋ ಮಾರಿ ಯಾವತ್ತೋ ಬಂದು ಬಿಡ್ತಾ ಇದ್ದೆ. ಅವಳಾದದ್ದಕ್ಕೆ ಹನ್ನೆರಡು ವರ್ಷ ನೀಸಿದಳು. ಜಮೀನ್ ಬಿಟ್ಟು ಬರಿಗೈಯಲ್ಲಿ ಬಾರದ ಹಾಗೆ ಮಾಡಿದಳು' ಎಂದು ಹೆಂಡತಿಯನ್ನು ಕೃತಜ್ಞತೆಯಿಂದ ನೋಡಿದ್ದನು.

**ಶಿವಪ್ಪ:** ಗಂಗವ್ವ ತನ್ನ ಅಕ್ಕ ಚೆನ್ನ ಬಸವ್ವನಿಂದ ದತ್ತು ತೆಗೆದುಕೊಂಡ ಮಗುವೇ ಶಿವಪ್ಪ. ಗಂಗವ್ವ ಪ್ರೀತಿ, ಕರುಣೆಯಿಂದ ಬೆಳೆದ ಇವನು ಹೆಂಗರಳು ಸ್ವರೂಪದ ಹೃದಯವಂತ–

ನಾಗಿದ್ದನು. ಶಿವೂ ಯೌವನಕ್ಕೆ ಕಾಲಿರಿಸಿ ಮದುವೆಯಾಗಿ ನಾಲ್ಕು ಮಕ್ಕಳಾದ ಮೇಲೆ ಶಿವೂನ ಜಮೀನು ಮಾಡಿಸುವ ಖಯಾಲಿ ಹುಟ್ಟಿಕೊಂಡಿತ್ತು. ಹಳ್ಳಿಯ ಬದುಕು. ಆರಂಭ ಇತ್ಯಾದಿಗಳ ಬಗೆಗೆ ಅತ್ಯಂತ ಆಕರ್ಷಣೆಯನ್ನು ಹೊಂದಿದ್ದ ಶಿವು ತಾನು ಏನು ಆಗಬೇಕೆಂಬುದನ್ನು ನೆನಪಿದ್ದನೋ ಅದಾಗದೇ ಬೇರೆಯದೇ ಹಾದಿಯನ್ನು ಹಿಡಿಯಬೇಕಿತ್ತು. ಜಮೀನು ಮಾಡಿಸಬೇಕೆಂಬ ತಮ್ಮ ಎದೆಯಾಳದ ಬಯಕೆಯನ್ನು ವ್ಯಕ್ತಪಡಿಸಿದ್ದೇ ತಡ ಗಂಗವ್ವ "ನಿಂಗೇನ್ ತಲೆಗಿಲೆ ಕೆಟ್ಟಿದ್ದದಾ ಶಿವೂ, ಓದಿದ್ದಾಯ್ತು. ಬರ್ದಿದ್ದಾಯ್ತು ಕೆಲಸಕ್ಕೂ ಸೇರಿದ್ದಾಯ್ತು. ಜಮೀನ್ ಮಾಡಿಸ್ತಾನಂತೆ ಜಮೀನ್....." ಎಂದು ಬೈಯ್ದು ಸುಮ್ಮನಿರಿಸಿದರು ಕ್ರಮೇಣ ತನ್ನ ಆಫಿಸಿನಲ್ಲಿ ಕೆಲಸ ಮಾಡಿಕೊಂಡು ಜಮೀನು ಮಾಡುಸುತ್ತಿದ್ದ ಇಬ್ಬರು ಗೆಳೆಯರು ಸಿಕ್ಕಿದ್ದು ಅವರ ಆಸೆ ಕೊನರಲು ಕಾರಣವಾಯಿತು.

ಕೊನೆಗೆ ಗಂಗವ್ವ ಒಪ್ಪಿಗೆಯನ್ನು ಸಂಗಮಳ್ಳಿಯಲ್ಲಿರುವ ಎಂಟುಕೆರೆ ಜಮೀನಿಗೆ ಪಂಪ್‌ಸೆಟ್ ಹಾಕಿಸಿ ಇದ್ದ ಬಂಗಾರವನ್ನು ಮಾರಿದರು. ನಂತರ ಪತ್ರ ದಾಳಿಯಿಂದ ಕಾಲುವೆ ಬರುವಂತೆ ಮಾಡಿದರು. ಇದರಿಂದಾಗಿ ಅಂದಾನಪ್ಪ, ಊರಿನ ದ್ವೇಷಕ್ಕೂ ತುತ್ತಾದರೂ, ಆದರೂ ಕುಗ್ಗದ ಇವರಿಗೆ ತಮ್ಮ ಜಮೀನಿನಲ್ಲಿ ಕೆಲಸಕ್ಕೆ ಬರುತ್ತಿದ್ದ ಆಳುಗಳು ವಿಶ್ವಾಸದ್ರೋಹ ಕುಗ್ಗುವಂತೆ ಮಾಡಿದರೂ ಅದಕ್ಕೆ ಅವಕಾಶ ನೀಡದಂತೆ ದೇವಮ್ಮ ನೋಡಿಕೊಂಡರು.

ಶಿವಪ್ಪ ಮೃದುಹೃದಯಿಯಾಗಿದ್ದು ಆಳುಗಳನ್ನು ಖಂಡಿಸುವ ಧೈರ್ಯ ಮಾಡುತ್ತಿರಲಿಲ್ಲ. ತನ್ನ ದಾಯಾದಿಗಳನ್ನು ನಂಬಿಯೂ ಹಲವಾರು ಸಮಸ್ಯೆಗಳನ್ನು ತಂದುಕೊಂಡರು. ಅವರನ್ನು ದೂರ ಇಡುವ ಪ್ರಯತ್ನ ಮಾಡಲಿಲ್ಲ. ಮೈಸೂರಿನಲ್ಲಿ ಕೆಲಸ ಮಾಡಿಕೊಂಡು ಜಮೀನನ್ನು ನೋಡಿಕೊಳ್ಳುವುದು ಏಕಕಾಲದಲ್ಲಿ ಎರಡು ದೋಣಿ ಮೇಲೆ ಕಾಲಿಟ್ಟು ನಡೆದಂತಾಯಿತು. ಅವರ ಸ್ಥಿತಿ ಊರಿನವರ ದ್ವೇಷ, ಅಂದಾನಪ್ಪನ ಹಗೆತನ, ಮಕ್ಕಳ ವಿದ್ಯಾಭ್ಯಾಸ, ಮದುವೆ, ತನ್ನ ಹೆಂಡತಿಗೆ ಎಷ್ಟೋ ಅಂತ ಕಷ್ಟ ಕೊಡುವುದು ಎಂಬ ಹೆಂಡತಿಯ ಮೇಲಿನ ಪ್ರೀತಿಯಿಂದಾಗಿ ವಲ್ಲದ ಮನಸ್ಸಿನಿಂದ ಜಮೀನನ್ನು ಮಾರಿ ಬಿಡುವ ನಿರ್ಧಾರ ಮಾಡಿ ಮೈಸೂರಿನ ಸಿದ್ದಪ್ಪನಿಗೆ ಮಾರಿ ಮೈಸೂರಿನಲ್ಲಿ ನೆಲೆಸುವ ನಿರ್ಧಾರ ಕೈಗೊಂಡರು. ಇಡೀ ಕಾದಂಬರಿಯಲ್ಲಿ ಶಿವಪ್ಪನ ಪಾತ್ರ ಪ್ರಧಾನ ಪಾತ್ರವಾಗಿದ್ದು ಇವರು ಹಳ್ಳಿಗಳಲ್ಲಿ ಕೆಲಸ ಮಾಡುವ ರೈತರ ಸಮಸ್ಯೆಗಳನ್ನು ಪಟ್ಟಣ ಮತ್ತು ಹಳ್ಳಿ ಎರಡರಲ್ಲೂ ಕೆಲಸ ಮಾಡುವ ಒಬ್ಬ ಸಾಮಾನ್ಯ ವ್ಯಕ್ತಿಯ ಪ್ರತಿನಿಧಿಯಾಗಿ ರೂಪುಗೊಂಡಿದ್ದಾರೆ.

**ಪೂರಕ ಪಾತ್ರಗಳು:** ಕಾದಂಬರಿಯಲ್ಲಿ ಸಹಾಯಕವಾಗಿ ಬರುವ ಪಾತ್ರಗಳೇ ಪೂರಕಪಾತ್ರಗಳು ಈ ಪಾತ್ರಗಳು ಕಾದಂಬರಿಯಲ್ಲಿ ಬಂದು ಹೋಗುತ್ತವೆ ಅಷ್ಟೇ ಅದರ ಆ ಪಾತ್ರಗಳು

ಕಾದಂಬರಿಯ ಕೊನೆಯ ತನಕ ನೆನಪಿನಲ್ಲಿ ಉಳಿಯುವಂತಹದು ಜಮೀನು ಕಾದಂಬರಿಯಲ್ಲಿ ಬರುವ ಅಂತಹ ಕಾದಂಬರಿಯೆಂದರೆ.

**ಅ) ಗಂಗವ್ವ:** ಮಾದಪ್ಪನವರ ಅವಳಿ ಮಕ್ಕಳಲ್ಲಿ ಗಂಗವ್ವ ಎರಡನೆಯವಳು. ಗಂಗವ್ವ ಒಂದು ರೀತಿಯ ಛಲದ, ಸ್ವಾಭಿಮಾನದ ಆ ಕಾಲಕ್ಕೆ ಪಂಡಿತ ಎನ್ನಬಹುದಾದ ಅಕ್ಷರಜ್ಞಾನ ಉಳ್ಳ ಆಕರ್ಷಣೀಯ ವ್ಯಕ್ತಿಯಾಗಿದ್ದಳು. ಇಂತಹ ಗಂಗವ್ವನನ್ನು ಕೈ ಹಿಡಿದದ್ದು ಮಾಚೇನಹಳ್ಳಿಯ ಪೊಲೀಸು ಚೆನ್ನಪ್ಪ.

ಇವರಿಗೆ ಮಕ್ಕಳಿಲ್ಲದ ಕಾರಣ ಗಂಗವ್ವ ತನ್ನ ಅಕ್ಕ ಚೆನ್ನವ್ವನಿಂದ ಹನ್ನೆರಡು ದಿನದ ಮಗುವನ್ನು ಮಡಿಲಿಗೆ ಹಾಕಿಸಿಕೊಂಡಳು. ಆ ನಂತರದಲ್ಲಿ ತಾಯಿ ಪ್ರೀತಿಯನ್ನು ಧಾರೆಯೆರೆದು ಶಿವೂನನ್ನು ಬಹಳ ಪ್ರೀತಿಯಿಂದ ಬೆಳೆಸಿದಳು. ಶಿವೂ ಹದಿನಾರು-ಹದಿನೇಳು ವರ್ಷಕ್ಕೆ ಬಂದಾಗ ದೇವಮ್ಮನನ್ನು ತಂದು ಮದುವೆ ಮಾಡಿದ್ದಳು. ಕಾಲಕಳೆದಂತೆ ಅಕ್ಕ-ತಂಗಿಯರ ಮನಸ್ಥಿತಿ ಬದಲಾಗುತ್ತಿರುವಂತೆ ಗಂಗವ್ವ ತನ್ನ ಹೆಸರಿನಲ್ಲಿ ಇದ್ದ ಜಮೀನನ್ನು ಆಸ್ತಿಯನ್ನು ಅಕ್ಕ ತಂಗಿಯರಿಗೆ ಹಂಚಿ ಶಿವೂಗಾಗಿ ಹತ್ತು ಎಕರೆ ಜಮೀನನ್ನು ಉಳಿಸಿಕೊಂಡಳು. ಕಾಲಕ್ರಮೇಣ ಶಿವೂ ಸರ್ಕಾರಿ ಕೆಲಸದಲ್ಲಿ ಇದ್ದರೂ ಜಮೀನು ಮಾಡಿಸಬೇಕೆಂಬ ಆಸೆ ಚಿಗುರೊಡೆಯಿತು. ಇದಕ್ಕೆ ಪ್ರತಿರೋಧ ವ್ಯಕ್ತಪಡಿಸಿ ಗಂಗವ್ವ ತನ್ನ ಮಗನ ಸ್ಥಿತಿ ನೋಡಿ ಕೊನೆಗೂ ಒಪ್ಪಿಗೆ ನೀಡಿದರು. ಗಂಗವ್ವ ಸಾಯುವವರೆಗೂ ಶಿವೂ ದೇವಮ್ಮ ತನ್ನ ಮರ್ಜಿಯಲ್ಲಿಯೇ ಬದುಕುವಂತೆ ನೋಡಿಕೊಂಡಿದ್ದರು.

**ಆ) ಅಂದಾನಪ್ಪ:** ಜಮೀನು ಮಾಡಿಸಲು ಆರಂಭಿಸಿದಾಗ ಪ್ರಾರಂಭವಾದ ಅಂದಾನಪ್ಪ ಮತ್ತವನ ಕುಟುಂಬದ ಹಗೆತನ, ಜಮೀನು ಮಾರಲಿಕ್ಕೂ ಕಾರಣವಾಯಿತು. ಅಂದಾನಪ್ಪ ಶಿವಪ್ಪ ಜಮೀನು ಮಾಡಲು ಬಂದಿದ್ದು ಇವನಿಗೆ ಇಷ್ಟವಾಗಿರಲಿಲ್ಲ ಆದರೂ ಶಿವಪ್ಪನ ಜಮೀನಿನವರೆಗೆ ಬಂದಿದ್ದ ಕಾಲುವೆಯನ್ನು ತನ್ನ ಜಮೀನಿಗೆ ವಿಸ್ತರಿಸುವ ಸಲುವಾಗಿ ಶಿವಪ್ಪನ ಸ್ನೇಹ ಸಂಪಾದಿಸಿದರು. ಶಿವಪ್ಪನ ಜಮೀನಿಗೆ ತನ್ನ ಅಣ್ಣನ ಮಕ್ಕಳನ್ನು ಕೆಲಸ ಸೇರಿಸಿದನು. ಶಿವಪ್ಪನ ಮನ ಒಲಿಸಿ ಮೂರೆಕೆರೆ ಜಮೀನನ್ನು ವಾರಕ್ಕೆ ಕೊಡುವಂತೆ ಮಾಡಿದ್ದನು ಅನಂತರ ಉಳುವವನೇ ಭೂಮಿಗೊಡೆಯ ಎಂಬ ಕಾನೂನಿನಲ್ಲಿ ಆ ಹುಡುಗರ ಹೆಸರಿಗೆ ಗದ್ದೆ ಮಾಡಿಸಿ. ಅನಂತರ ತಾನು ದಕ್ಕಿಸಿಕೊಳ್ಳಲು ಯೋಚಿಸಿದನು. ಇದನ್ನು ತಿಳಿದ ಶವಪ್ಪ ದೇವಮ್ಮ ಹುಡುಗರನ್ನು ಕೆಲಸದಿಂದ ತೆಗೆದು. ಅಂದಾನಪ್ಪ ತೋಡಿದ ಕಾಲುವೆಯನ್ನು ರಾಮಣ್ಣ ಸಹಾಯದಿಂದ ಮುಚ್ಚಿಸಿದರು. ಇದರಿಂದಾಗಿ ಹಲ್ಲು ಕಿತ್ತ ಹಾವಿನಂತಾದ ಅಂದಾನಪ್ಪ ಬಹಳವಾಗಿ ಯೋಚಿಸಿ ಪಂಚಾಯ್ತಿಗೆ ದೂರನ್ನು ನೀಡಿದನು. ಪಂಚಾಯ್ತಿಯು ಶಿವಪ್ಪನಿಗೆ ಬುದ್ಧಿವಾದ ಹೇಳಿ ದಂಡ ಕೊಡಬೇಕೆಂದು ಕೇಳಿದರೂ ಅದಕ್ಕೆ

ಒಪ್ಪದ ಶಿವಪ್ಪನಿಗೆ ಕಟ್ಟನ್ನು ವಿಧಿಸಿದರು. ಪಂಚಾಯ್ತಿಯ ಮಾತಿಗೆ ಬಗ್ಗದ ಶಿವಪ್ಪನ ಮೇಲೆ ಮತ್ತು ದ್ವೇಷ ಹೆಚ್ಚಾಗಿ ಜಮೀನು ಕಾಯಲೆಂದು ಬರುವ ಆಳುಗಳು ಆರು ತಿಂಗಳು. ವರ್ಷದ ಮೇಲೆ ಇರದಂತೆ ಜಮೀನಿನಲ್ಲಿ ಇರದಂತೆ ವಾಪಸ್ಸು ಮರಳುವಂತೆ ಮಾಡುತ್ತಿದ್ದನು. ಶಿವಪ್ಪನ ಜಮೀನಿಗೆ ಬರುವ ನಾಯಿಗಳಿಗೆಲ್ಲಾ ವಿಷವಿಕ್ಕಿ ಸಾಯಿಸಿ ಬಿಡುತ್ತಿದ್ದನು. ಇವನ ದ್ವೇಷ ಎಷ್ಟಿತ್ತೆಂದರೆ ದೇವಮ್ಮನನ್ನು ಹತ್ಯೆ ಮಾಡುವಷ್ಟು ಇತ್ತು. ನೇರವಾಗಿ ಜಗಳ ತೆಗೆಯಲು ಯಾವುದೇ ಕಾರಣವೂ ಸಿಗದಿದ್ದ ಅಂದಾನಪ್ಪ ಮತ್ತವರ ಗೆಳೆಯರು ಅಂದಾನಪ್ಪನ ಜಮೀನಿಗೆ ಶಿವಪ್ಪನ ಜಮೀನಿನಿಂದ ನೀರು ಕಟ್ಟುತ್ತಿರುವುದನ್ನು ಗಮನಿಸಿದ ದೇವಮ್ಮ ಪ್ರಶ್ನಿಸಿದಾಗ ಇವರ ಜಗಳ ತಾರಕಕ್ಕೇರಿತ್ತು. ಆ ಸಮಯದಲ್ಲಿ ಅಂದಾನಪ್ಪ ಆಡುವ ಮಾತುಗಳು '... ಬಡ್ಡೀನ್ನಾ ಅಲ್ಲೇ ಕಾಲ್ವೆಗ್ಹಾಕೆ ತುಳುದ್ ಬುಡು ಮುಂದ್ ತಲಾ ದಂಡಾ, ನೋಡ್ಕಂಳಾಂವ, ಮೊದ್ಲು ಇಲ ಅನ್ನುಸ್‌ಬುಡು ಅವ್ಳ. ಅಂವಾ ಅವ್ನಲ್ಲ ಆ ಸಿವಪ್ಪ ಬಾಲ ಮುದರ್‌ಕ್ಕಂಡು ಇಲ್ಲಿಂದ ವಾಯ್ತಾನೆ' ಎಂಬ ಮಾತುಗಳಿಂದ ತಿಳಿಯುತ್ತದೆ. ಅಂದಾನಪ್ಪನ ಹಗೆತನ.

**ಇ) ಚೆನ್ನಬಸವ್ವ:** ಮಾದಪ್ಪನವರ ಮೊದಲನೆಯ ಮಗಳು. ಗಂಗವ್ವನ ಅಕ್ಕ ಶಿವಪ್ಪನ ಹೆತ್ತ ಅವ್ವ ಇವಳನ್ನು ಬಿಡದಿಯ ಬಳಿಯ ಹಳ್ಳಿಯೊಂದರಲ್ಲಿ ವಾಸವಾಗಿದ್ದ ಹೊನ್ನಪ್ಪ ಮದುವೆಯಾಗುತ್ತಾನೆ. ಆರಕ್ಕೇರದ ಮೂರಕ್ಕಿಳಿಯದ ಜೀವನ ಇವರದಾಗಿತ್ತು. ಚೆನ್ನಬಸವ್ವನ ಸಂಸಾರ ತೀರಾ ಸಂಕಷ್ಟಕ್ಕೆ ಸಿಲುಕಿದಾಗ ಗಂಗವ್ವ ಮತ್ತೆಯೂ ಚೆನ್ನಾಗಿ ನಡೆಯುತ್ತಿದ್ದ ಹೊಟೇಲನ್ನು ಬಿಟ್ಟುಕೊಟ್ಟಳು. ಚೆನ್ನಬಸವ್ವ ತಮ್ಮ ಎರಡನೆಯ ಮಗ ಶಿವಪ್ಪನನ್ನು ದತ್ತು ಕೊಡಲು ಒಪ್ಪಿ ಹನ್ನೆರಡು ದಿನದ ಕೂಸನ್ನು ಗಂಗವ್ವನ ಮಡಿಲಿಗೆ ಹಾಕಿ ಬಿಟ್ಟಿದ್ದರು. ಆರ್ಥಿಕ ಸ್ಥಿತಿ ಉತ್ತಮವಾದಾಗ ತನ್ನ ಮಗನನ್ನು ಗಂಗವ್ವನಿಗೆ ಕೊಡಬಾರದೆಂದುಕೊಂಡು ಹಲವಾರು ಬಾರಿ ಮಗನನ್ನು ಓಲೈಸಿ ತನ್ನತ್ತ ಸೆಳೆಯಲು ಪ್ರಯತ್ನಿಸಿದರೂ ಆಗಲೇ ಗಂಗವ್ವನ ಸಂಪೂರ್ಣ ಪ್ರೀತಿಯನ್ನು ಅಕ್ಕರೆಯನ್ನು ಸವಿದಿದ್ದ ಶಿವಪ್ಪ ಇದನ್ನು ನಿರಾಕರಿಸಿ ನನಗೆ ಗಂಗವ್ವನೇ ಬೇಕು ಎಂದು ಹಠಮಾಡುತ್ತಿದ್ದನು. ಇದನ್ನು ಕಂಡ ಚೆನ್ನಬಸವ್ವ ಮತ್ತೆ ಎಂದಿಗೂ ತಮ್ಮ ಮನೆಗೆ ಕರೆತರುವ ಪ್ರಯತ್ನ ಮಾಡಬಾರದೆಮದು ತೀರ್ಮಾನಿಸಿದ್ದರು.

ಮೇಲೆ ತಿಳಿಸಿದ ಪಾತ್ರಗಳಲ್ಲದೆ ಇನ್ನೂ ಹಲವು ಪೂರಕ ಪಾತ್ರಗಳು ಕಾದಂಬರಿಯನ್ನು ಮುನ್ನಡೆಸಲು ಸಹಾಕಯಕವಾಗಿವೆ.

**ಅಭಿವ್ಯಕ್ತಿ/ಶೈಲಿ:** ಜಮೀನು ಕಾದಂಬರಿಯೂ ಒಂದು ಗ್ರಾಮೀಣ ಪರಿಸರ ಹೊಂದಿರುವ ಕಾದಂಬರಿಯಾಗಿದ್ದು. ರೈತನ ಅಂದಿನ–ಸಮಸ್ಯೆಗಳನ್ನು ಇಂದಿನ ಸಮಸ್ಯೆಗಳಂತೆಯೇ ಗ್ರಾಮ್ಯ ಭಾಷೆಯಲ್ಲಿಯೇ ವ್ಯಕ್ತಪಡಿಸಿದ್ದಾರೆ. ಭಾಷೆಗೆ ಕಲಾತ್ಮಕ ಗುಣವಿದ್ದು, ಭಾಷೆಯೂ ಪರಿಸರದೊಂದಿಗೆ ಬೆರೆತು ಹೋಗುತ್ತದೆ. ಈ ಗುಣವನ್ನು ಚೆನ್ನಾಗಿ ದುಡಿಸಿಕೊಂಡಿರುವ

ಲೇಖಕಿ ಕಾದಂಬರಿಯನ್ನು ಬಹಳ ಸೂಕ್ಷ್ಮವಾಗಿಯೇ ಬರೆದಿದ್ದಾರೆ. ಜಮೀನು ಕಾದಂಬರಿಯೂ ನುಡಿಗಟ್ಟಿನ ಒಳಗಡೆ ಆಡು ಮಾತಿನಲ್ಲಿ ಬರುವ ಜನರ ಭಾಷೆಯನ್ನು ಒಳಗೊಂಡಿದೆ. ಇದು ನಂಜನಗೂಡಿನ ಹಳ್ಳಿಗಳಲ್ಲಿ ಕಂಡುಬರುವ ಭಾಷೆಯನ್ನು ಬಳಸಿದ್ದಾರೆ.

ಜಮೀನು ಕಾದಂಬರಿಯಲ್ಲಿ ಗ್ರಾಮ್ಯ ಭಾಷೆಯ ಜೊತೆಗೆ ಬಯಗುಳಗಳನ್ನು ಬಳಸಿಕೊಂಡಿದ್ದಾರೆ. ಬೈಗುಳಗಳನ್ನು ಕಾದಂಬರಿಗಳಲ್ಲಿ ಬಳಸಿದ್ದರೂ ಅಸಹ್ಯವಾದ ಅತಿರೇಕದ ಬೈಗುಳಗಳನ್ನು ಬಳಸಿಲ್ಲ ಬದಲಾಗಿ ಕಾದಂಬರಿಯ ಚೌಕಟ್ಟಿನೊಳಗೆ ಬರುವಂತಹ ಬೈಗುಳಗಳನ್ನು ಬಳಸಿದ್ದಾರೆ.

"ನಾನು ಕಣಳಿ ಮರಿ ಇದ್ಯಾಕಳಿ ಮೈಸೂರಿಂದ ಸಿವಪ್ಪೋರು ಇನ್ನೂ ಬಂದಿಲ್ವಳಿ..." ಎಂಬ ಮಾತುಗಳು ನಂಜನಗೂಡಿನ ಹಚ್ಚ ಕನ್ನಡವಾಗಿ ಹೊರಹೊಮ್ಮಿದೆ. ಈಗಲೂ ನಂಜನಗೂಡಿನ ಸುತ್ತಮುತ್ತ ಇರುವ ಹಳ್ಳಿಗಳಲ್ಲಿ ಇದೇ ತೆರವಾದ ಮಾತುಗಳನ್ನು, ಭಾಷೆಯನ್ನು ಕಾಣಬಹುದಾಗಿದೆ. ಇದಲ್ಲದೆ "ಅಲ್ಲಾ ಇವ್ರಿಗೆ ನಾವೇನ್ ಅನ್ಯಾಯ ಮಾಡಿದ್ದೊಂತ ಇವ್ರು ನಮ್ಮ ಹೊಟ್ಟೆ ಹಿಂಗ್ ವುರಿಸ್ಕಂಡರೂ ಅಂತೀನಿ" ಹಾಳಾದ್ ಜಮೀನ್ನ ಸುಟ್ಟ ಹಾಕಿ ಕೈ ತೊಳ್ಕಬೇಕು ಇತ್ಯಾದಿ ಮಾತುಗಳು ಗ್ರಾಮೀಣ ಜನರ ಸರಳ ಮಾತುಗಳಾಗಿದ್ದು ಅದನ್ನು ಲೇಖಕಿಯೂ ತನ್ನ ಕಾದಂಬರಿಯ ಬಹುಭಾಗಕ್ಕೆ ಅಳವಡಿಸಿಕೊಂಡಿದ್ದಾರೆ.

'ಆನೆಗೆ ಚಡ್ಡಿಯಿಲ್ಲ ಬೆಟ್ಟಕ್ಕೆ ಗೌನಿಲ್ಲ' ಎಂಬ ಮಾತುಗಳನ್ನು ಚೆನ್ನ ಬಸವ್ವ ತನ್ನ ಪ್ರಶ್ನೆಗೆ ತಾವೇ ಉತ್ತರವನ್ನು ಕೊಟ್ಟುಕೊಳ್ಳುತ್ತಿದ್ದರು. ಆದರೂ ಇದು ನುಡಿಗಟ್ಟು ಆಗಿದ್ದು ಇಂತಹ ನುಡಿಗಟ್ಟನ್ನು ಕಾದಂಬರಿಯ ಮಧ್ಯೆ ಮಧ್ಯೆಗಳಲ್ಲಿ ಕಾಣಬಹುದು.

"ದೇವ್ರು ನಮ್ಗೆ ಬಡತನ ಕೊಟ್ಟಿರಬೋದು ಹಂಗಂತ ಮಕ್ಕಳ್ನ ಬ್ಯಾರೆಯೋರಿಗೆ ಕೊಟ್ಟಬುಡೊಂತ ಹೇಳಿದ್ದದಾ" ಎಂಬ ಮಾತುಗಳು ಹಳ್ಳಿ ಜನರ ಬಡತನಕ್ಕೆ ಅವರ ಅಸಹಾಯಕತೆಗೆ ಸಾಕ್ಷಿಯಾಗಿದೆ. ಜಮೀನ್ ಮಾಡಿ ಸಾಕಾಗಿ ಕುಂತಿರಾ ನಮ್ಮುನ್ ಕಂಡ್ರೆ ಗೊತ್ತಾಗಲ್ವಾ ಅದ್ರಲ್ಲಿ ಏನ್ ಸುಕ ಸುರ್ಕಂಡ್ ಇದ್ದಿವೀಂತಾ" ಎಂಬ ಮಾತು ಪ್ರತಿಯೊಬ್ಬ ರೈತರ ಮಾತಾಗಿ ಅಲ್ಲದೆ ಜಮೀನನ್ನು ಮಾಡುವುದರಿಂದ ಇಲ್ಲವೆ ಮಾಡಿಸುವುದರಿಂದ ಅನುಭವಿಸಬಹುದಾದ ಸಮಸ್ಯೆಗಳುಕಷ್ಟನಷ್ಟಗಳ ಪ್ರತೀಕವಾಗಿ ಈ ಮಾತು ಕಾದಂಬರಿಯಲ್ಲಿ ಬಳಕೆಯಾಗಿದೆ.

'ಹಲ್ಲು ಕಿತ್ತ ಹಾವು', 'ಚೇಳಿಗೆ ಕುಟುಕೋ ಬುದ್ಧಿ ಕುಟ್ಕತದೆ, 'ಹಾವಿಗೆ ಕಚ್ಚೋ ಬುದ್ದಿ ಕಚ್ತದೆ' 'ನಾಯಿಗೆ ಇರುವ ಕೃತಜ್ಞತೆ ಮನುಷ್ಯನಿಗಿಲ್ಲ' 'ಶತ್ರುವಿನ ಶತ್ರು ತನಗೆ ಮಿತ್ರ', 'ಬೊಗಳ ನಾಯಿ ಕಚ್ಚಲ್ಲಾ', 'ತರೋದು ಮೂರು ಕಾಸು ಕ್ವಾಣೆ ತುಂಬಾ ಹಾಸು' ಎಂಬಿತ್ಯಾದಿ

ನುಡಿಗಟ್ಟು, ಗಾದೆಯನ್ನು ಒಳಗೊಂಡ ಭಾಷೆಯನ್ನು ಜಮೀನು ಕಾದಂಬರಿಯಲ್ಲಿ ಬಳಸಿಕೊಂಡಿದ್ದಾರೆ.

'ಬಡ್ಡಿ ಮಗ ಅಂವಾ ಅವ್ನಲ್ಲ ಅಂವಾ ಮೈಸೂರ್ಗೆ ವೋಯ್ತಾನೆ...' 'ಬಡ್ಡೀನ್ನಾ ಅಲ್ಗೇ ಕಾಲ್ಪೆಗ್ಹಾಕೆ ತುಳುದ್‌ಬುಡು...' 'ಆ ಚೆಂಗೂಲ್ ನನ್‌ಮಗಂಗೆ ನಮ್ ಹೆಸ್ರುಗಳೆಲ್ಲಾ ಹೆಂಗೆ ತಿಳಿದೋಯ್ತು' ಇವನಪ್ಪನಾ ಕ್ಯಾಯಾ ಈ ಸೂಳೆ ಮಗನಿಂದ್ಲೆ ಕಾಲುವೆ ನನ್ ಜಮೀನ್ ತಂಕಾ ಬರ್‍ನಿಲ್ಲಾ... ಈ ಬೋಳಿ ಮಗ್ನಿಂದ್ಲೆ ನನ್ನ ಕೆಲ್ಸ ಆಗ್ಲಿಲ್ಲ' ಎಂಬ ಮಾತುಗಳನ್ನು ಕಾಣಬಹುದಾಗಿದೆ. ಮೇಲಿನ ವಾಕ್ಯಗಳು ಬೈಗುಳಗಳಾಗಿದ್ದು ಇಂತಹ ವಾಕ್ಯಗಳು ಕಾದಂಬರಿಯ ಉದ್ದಕ್ಕೂ ಸಿಗುತ್ತದೆ. ಆದರೂ ಬೈಗುಳಗಳು ಎಲ್ಲೆ ಮೀರದೆ ಕಾದಂಬರಿಯನ್ನು ಸೂಕ್ತ ರೀತಿಯಲ್ಲಿ ಮುಂದುವರೆಸಲು ಸಹಾಯಕವಾಗಿದೆ. ಇಡೀ ಕಾದಂಬರಿಯಲ್ಲಿ ವೇದಾರವರು ಪೃಥ್ವೀ ಸ್ಪರ್ಶದ ಭಾಷೆ ಎದ್ದುಕಾಣುತ್ತದೆ.

**ಜಯ**

**ವಸ್ತು ಮತ್ತು ಸ್ವರೂಪ**

ಇದು ಒಂದು ಪೌರಾಣಿಕ ಕಾದಂಬರಿಯಾಗಿದೆ. ಮಹಾಭಾರತದ ಕುರುಕ್ಷೇತ್ರ ಯುದ್ಧವನ್ನು ತೆಗೆದುಕೊಂಡು ರಚಿಸಿರುವ ಕಾದಂಬರಿಯಾಗಿದೆ. ಇದನ್ನು ಸ್ತ್ರೀವಾದಿ ನೆಲೆಯಲ್ಲಿಯೇ ವೈಚಾರಿಕತೆಯನ್ನು ಮತ್ತು ಮೌಲ್ಯಗಳನ್ನು ಕುರಿತಾದ ಪ್ರಶ್ನೆಗಳನ್ನು ಎತ್ತುವ ಒಂದು ಕಾದಂಬರಿಯಾಗಿದೆ. ಅಸಮಾನ ಅಧಿಕಾರದಂತ ಸ್ತ್ರೀ–ಪುರುಷ ಸಂಬಂಧಗಳೇ ಕೊನೆಗೆ ಕುರುಕ್ಷೇತ್ರದಂತಹ ಯುದ್ಧಗಳನ್ನು ಅನಿವಾರ್ಯವಾಗಿಸುತ್ತವೆ ಎಂಬ ಮೌಲಿಕ ಚಿಂತನೆಯನ್ನು ಈ ಕಾದಂಬರಿ ಮಂಡಿಸುತ್ತದೆ.

ಈ ಕಾದಂಬರಿಯು ಯುದ್ಧದ ಆರಂಭದೊಂದಿಗೆ ಪ್ರಾರಂಭವಾಗುತ್ತದೆ. ಈ ಕಾದಂಬರಿಯ ಉದ್ದಕ್ಕೂ ವರ್ತಮಾನ, ಭೂತಕಾಲದ ವಿಷಯಗಳು ಘಟನೆಗಳು ಮಧ್ಯೆ ಮಧ್ಯೆ ಬೆರೆತಂತಹ ತಂತ್ರವನ್ನು ಲೇಖಕಿ ಬಳಸಿದ್ದಾರೆ. ಅಲ್ಲದೆ ಮಹಾಭಾರತದಲ್ಲಿ ಇಲ್ಲದೇ ಇರುವ ಹೊಸ ಪಾತ್ರಗಳ ಸೃಷ್ಟಿಯಿಂದ ಯುದ್ಧ ವಿರೋಧಿ ನೀತಿಯನ್ನು ಪ್ರತಿಪಾದಿಸುತ್ತಿದ್ದಾರೆ.

ಭುವನ ಮೋಹಕ ರೂಪಿದ್ದ ದ್ರೌಪದಿಯನ್ನು ಗೆದ್ದ ಅರ್ಜುನನೊಬ್ಬನಿಗೆ ಮಡದಿಯಾಗಲು ಬಿಟ್ಟು ಬಿಡಲಿಲ್ಲ ವಿಧಿ. ಕುಂತಿ ತನ್ನ ಮಗ ಗೆದ್ದು ತಂದಿದ್ದು ಏನೆಂದು ತಿಳಿಯದೆ ಹಂಚಿಕೊಳ್ಳಲೆಂದು ಹೇಳಿದ್ದಳು. ಅದರಂತೆ ಐವರು ಪಾಂಡವರು ಹೆಂಡತಿಯಾದಳು. ಇದು ಮೊದಲ ಸಲ ದ್ರೌಪದಿಯ ಹೆಣ್ತನಕ್ಕೆ ಆದ ಅಪಮಾನವಾಗಿತ್ತು.

ದುರ್ಯೋಧನನ ಜೂಜಾಟದ ಆಹ್ವಾನವನ್ನು ಸ್ವೀಕರಿಸಿದ ಧರ್ಮರಾಯ ಅವನೊಂದಿಗೆ ಜೂಜಾಟವಾಡಿ ಎಲ್ಲವನ್ನು ಕಳೆದುಕೊಂಡ, ಕೊನೆಗೆ ದ್ರೌಪದಿಯನ್ನು ಒತ್ತೆಯಿಟ್ಟು ಸೋತನು. ಇದರಿಂದಾಗಿ ದ್ರೌಪದಿಯನ್ನು ರಾಜಸಭೆಗೆ ಕರೆಯಿಸಿ ಸೀರೆ ಸೆಳೆದು ಅವಮಾನಗೊಳಿಸಿದರು. ದುಶ್ಯಾಸನ ಸೀರೆ ನರಿಗೆಗೆ ಕೈಹಾಕಿ ಸೆಳೆಯುವಾಗ ದ್ರೌಪದಿ ಅವನನ್ನು ಅಂಗಲಾಚಿ ಬೇಡ ಎಂದು ಬೇಡಿದರೂ ಕೇಳಲಿಲ್ಲ ಕೋಪಗೊಂಡಿದ್ದ ದ್ರೌಪದಿ 'ದುಶ್ಯಾಸನ' ಎಂದು ಛೀಳಿಟ್ಟಿದ್ದಳು ಮಹಿಳೆಯೊಬ್ಬಳ ಹೆಣ್ತನದ ಅಪಮಾನ. ಎಂತಹ ಪರಿಣಾಮದಲ್ಲಿ ಅಂತ್ಯಗೊಳ್ಳುತ್ತದೆ ಎಂಬುದನ್ನು ಇಡೀ ಜಗತ್ತಿಗೇ ತೋರಿಸುತ್ತೇನೆ. . .. ಇದು ನನ್ನ ಪ್ರತಿಜ್ಞೆ, ಭರತ ಕುಲಕ್ಕೆ ಕಳಂಕನಾದ ಈ ಪಾಪಿ ದುಶ್ಯಾಸನ ಎದೆ ಬಗೆದು ಬಿಸಿ ಬಿಸಿ ರಕ್ತ ಕುಡಿದು ದ್ರೌಪದಿಯ ಪ್ರತಿಶೋಧವನ್ನು ಪೂರ್ಣಗೊಳಿಸುತ್ತೇನೆ" ಎಂದು ಭೀಮ ಧ್ವನಿಗೂಡಿಸಿದನು. ಈ ಇಬ್ಬರ ಪ್ರತಿಜ್ಞೆ ಈಡೇರಬೇಕಾದರೆ ಯುದ್ಧ ಆಗಲೇಬೇಕಾಯಿತು.

ಭರತಕುಲದ ಮಹಾವಂಶದ ದಾಯಾದಿಗಳ ನಡುವೆ ನಡೆಯುತ್ತಿದ್ದ ಯುದ್ಧ ಅದು ಕುರುಕ್ಷೇತ್ರ ಯುದ್ಧ. ಯಾರೂ ಯಾವ ಮಾತನ್ನು ಆಡಲಾರದಂತಹ ನಿಶ್ಯಬ್ಧ ಎಲ್ಲರ ಮನದಲ್ಲೂ ಆಕ್ರಮಿಸಿಕೊಂಡಿತ್ತು. ಮೊದಲ ದಿನದ ಯುದ್ಧ ಪ್ರಾರಂಭವಾಗಿ ಆ ಯುದ್ಧದಲ್ಲಿ ಉತ್ತರ ಮಡಿದಿದ್ದನು. ಇದನ್ನು ಕೇಳಿದ ದ್ರೌಪದಿ ದು:ಖಿತಳಾಗಿ ಅವನು ಆಡಿದ ಮಾತುಗಳನ್ನು ನೆನೆಯುತ್ತಾಳೆ. ವಿಜಯಿಯಾಗು ಎಂದು ಹರಸಿದಾಗ ಬೇಡ ದಯವಿಟ್ಟು ಹಾಗೆ ಹರಸಬೇಡಿ ಏನು ಉಳಿದಿರುತ್ತದೆಂದು, ಏನನ್ನು ನೋಡಲು ವಿಜಯಿಯಾಗಿ ಉಳಿಯಬೇಕು, ಯುದ್ಧ ಬೇಕು ಎನ್ನುವವರು ವಿಜಯಿಗಳಾಗಿ ಉಳಿಯಲಿ ಉಳಿದು ಯುದ್ಧದ ರುದ್ರತಾಂಡವವನ್ನು ನೋಡಿಯಾದರೂ ಯುದ್ಧ ವಿರೋಧಿ ನಿಲುವು ತಾಳುವಂತಾಗಲಿ. ಈ ಯುದ್ಧದ ಮೊದಲ ಪರಾಜಯ, ಮೊದಲ ಮರಣ ನನಗೆ ಬರಲೆಂದು ಹೇಳಿದ ಉತ್ತರ ಯುದ್ಧ ವಿರೋಧಿಸುತ್ತಲೇ ಯುದ್ಧಭೂಮಿಯಲ್ಲಿ ಮಡಿದನು.

ಕೌರವದ ಪಾಳೆಯದಲ್ಲೂ ಯುದ್ಧ ಉತ್ಸಾಯಿಯಾಗಿ ಯುದ್ಧ ಮಾಡುತ್ತಿದ್ದರು ಆದರೆ ಭಾನುಮತಿಗೆ ತನ್ನ ಗಂಡನ ಕೆಡುಕುತನವನ್ನು ಕಂಡು ದುರ್ಯೋಧನನಿಗೆ ಬುದ್ಧಿ ಹೇಳುವಂತೆ ಹಿರಿಯರಾದ ಭೀಷ್ಮನನ್ನು ಕೇಳಿದರೆ ಅವರು ಅನುಸರಿಸಿಕೊಂಡು ಹೋಗುವಂತೆ ಹೇಳಿ ಕೈಚೆಲ್ಲಿದ್ದರು ನಂತರ ಧೃತರಾಷ್ಟ್ರರಲ್ಲಿ ಕೇಳಿದಾಗ ತನ್ನ ಮಗನದೇ ಸರಿ ಎಂದು ಅವರ ಪರ ಮಾತನಾಡಿದರು. ಗಾಂಧಾರಿಗೆ ಕಣ್ಣಿರಲಿಲ್ಲವಷ್ಟೇ ಕಿವಿಯಿತ್ತು. ಗಾಂಧಾರಿಗೆ ಭಾನುಮತಿ ನಿಮ್ಮ ಮಕ್ಕಳ ಇಷ್ಟೆಲ್ಲಾ ದುರಾಚಾರಗಳಿಗೆ ನೀವೇ ಕಾರಣವೆಂದ ಕೋಪಬರುತ್ತದೆ ಅಲ್ಲವೆ ಅತ್ತೆ ಎಂದು ಕೇಳಿದಾಗ ತನ್ನ ಒಳಗುಟ್ಟನ್ನು ಬಿಚ್ಚಿಟ್ಟಳು ಗಾಂಧಾರಿ.

"ನಾನು ನಾನಾಗಿ ಪತ್ನಿಯಾಗಿರಲಿಲ್ಲ. ನಾನು ನಾನಾಗಿ ತಾಯಿಯಾಗಲಿಲ್ಲ ದುರಂತವೆಂದರೆ ನಾನು ನಾನಾಗಿ ದುರಂತವೂ ಆಗುತ್ತಿಲ್ಲ" ಎಂದಳು. ನನ್ನ ಅಪ್ಪ

ಸುಬಲರಾಜ ನಿಜಕ್ಕೂ ದುರ್ಬಲನಾಗಿದ್ದನು. ಭೀಷ್ಮ ಭರತವಂಶಕ್ಕೆ ಹೆದರಿ ಮಗಳು ಗಾಂಧಾರಿಯನ್ನು ಧೃತರಾಷ್ಟ್ರನಿಗೆ ಮದುವೆ ಮಾಡಿದನು. ಮದುವೆ ದಿನವೇ ಎದುರಿಗಿದ್ದ ವರ ಏಳು ಜೇರಿಗೆಯನ್ನು ತನ್ನ ತಲೆಯ ಮೇಲೆ ಸರಿಯಾಗಿ ಹಾಕದೆ ಭುಜ, ನೆಲ, ಪಕ್ಕದಲ್ಲಿದ್ದ ಸಖಿ ಹೀಗೆ ಅಸ್ತವ್ಯಸ್ತವಾಗಿ ಎಲ್ಲೆಲ್ಲೋ ಹಾಕಿಬಿಟ್ಟಾಗ! ಗಾಬರಿಯಾದ ಗಾಂಧಾರಿ ಲಜ್ಜೆ, ಸಂಕೋಚ ಬಿಟ್ಟು ತಲೆ ಎತ್ತಿ ನೋಡಿದಳು ಎದುರುಕಂಡ ನೋಟ ಅವಳನ್ನು ಏಕಕಾಲಕ್ಕೆ ಸ್ಫೋಟಿಸಿದ್ದವು. ಕಣ್ಣಲ್ಲಿ ನೀರು ಹರಿಯಲಾರಂಭಿಸಿತ್ತು. ಸಖಿಯರ ಕೈಯಲ್ಲಿದ್ದ ಅಂತರಪಟವನ್ನು ಕಿತ್ತುಕೊಂಡು ಅವಳು ತನ್ನ ಕಣ್ಣಿಗೆ ತಾನೇ ಪಟ್ಟಿ ಕಟ್ಟಿಕೊಂಡು ಬಿಟ್ಟಿದ್ದಳು. ತನಗೆ ದೊರಕುತ್ತಿರುವ ಅಂಧಪತಿಯನ್ನು ನೋಡಲಾರೆನೆಂಬಂತೆ? ಆದರೆ ಇಡೀ ಮದುವೆ ಮನೆ ಆಕ್ಷಣಕ್ಕೆ ನಡೆಸಿದ ಆ ಕಾರ್ಯವನ್ನು ಅಲ್ಲಿ ನೆರೆದಿದ್ದ ಜನತೆ ಅವಳ ಅಪೂರ್ವ ಪಾತಿವ್ರತ್ಯದ ಜೊತೆಗೆ ಅಂಟು ಹಾಕಿಬಿಟ್ಟಿತ್ತು. ಅವಳ ಕಾರ್ಯವನ್ನು ಜನಗಳು ಜೀವಮಾನ ಪೂರ್ತಿ ಅವಳು ಹಾಗೆ ಇರುತ್ತಾಳೆಂದು ಘೋಷಿಸಿಬಿಟ್ಟಿತ್ತು. ಗಾಂಧಾರಿ ಪಾತಿವ್ರತ್ಯದ ಹೆಸರಿನಲ್ಲಿ ಕಂಗಳ ಬೆಳಕನ್ನು ಕಳೆದುಕೊಂಡಿದ್ದಳು. ಬಯಸದ ದಾಂಪತ್ಯದ ಜೊತೆಯಲ್ಲಿಯೇ ಬಂದ ತಾಯ್ತನವೂ ಒಂದು ಹೊರೆಯಾಗಿತ್ತು. ಆದರೂ ದುರ್ಯೋಧನ, ದುಶ್ಶಾಸನ, ದುಶ್ಶಲೆಯರನ್ನು ಅವಳು ಹೆತ್ತಿದ್ದಳು ಕಣ್ಣಿಗೆ ಬಟ್ಟೆ ಕಟ್ಟಿಕೊಂಡು ಮಕ್ಕಳನ್ನು ಹೇಗೆ ನೋಡಿಯಾಳು. ಮಕ್ಕಳನ್ನು ಸರಿಯಾಗಿ ಬೆಳೆಸಲು ಕೆಡುಕಿನ ಕೊಳದಲ್ಲಿ ಮುಳುಗೇಳುತ್ತಿದ್ದ ಕೌರವರ ಕೆಡುಕಿನೊಂದು ಭಾಗವನ್ನು ನಿತ್ಯ ಉಣ್ಣುತ್ತಿರುವ ಸೊಸೆಯೂ ಅದೇ ಮಾತುಗಳಲ್ಲಿ ತನ್ನನ್ನು ದೂರುತ್ತಿದ್ದಾಳಲ್ಲ ಎಂಬ ಕಾರಣಕ್ಕೆ ತನ್ನ ದುರಂತದ ಬಗೆಗೆ ಗಾಂಧಾರಿ ನಕ್ಕಿದಳು.

ಕೌರವ ಕಡೆಯ ಸೇನೆಗೆ ಕರ್ಣ ನಾಯಕನಾದ ಎಂಬ ಸುದ್ದಿ ತಿಳಿಯುತ್ತಿದ್ದಂತೆ ಕುಂತಿ ನಿಂತಲ್ಲಿ ನಿಲ್ಲಲಾರದೆ, ಕುಳಿತಲ್ಲಿ ಕುಳಿತಿರಲಾರದೆ ಸಂಕಟ ಅನುಭವಿಸತೊಡಗಿದ್ದಳು. ಕನ್ಯೆತನದ ಪೆಚ್ಚುತನದಲ್ಲಿ ಮಾಡಿಕೊಂಡ ತಪ್ಪು. ಅದೇ ತಾನೇ ತಾನು ಹೆತ್ತಮಗುವನ್ನು ತಾನೇ ಅಬ್ಬೇಪಾರಿ ಮಾಡುತ್ತಿದ್ದೇನೆ ಎಂಬ ಭಾವನೆ ಕಿಂಚಿತ್ತೂ ಇಲ್ಲದೆ ಹಸುಗೂಸು ಕರ್ಣನನ್ನು ಗಂಗೆಯಲ್ಲಿ ತೇಲಿಬಿಟ್ಟಳು. ದೊಡ್ಡದೊಂದು ಭಾರ ಕಳೆದಂತೆ ನಿಟ್ಟುಸಿರು ಬಿಟ್ಟಿದ್ದಳು. ಈ ಮಗು ಸೂತನಾದ ಅಧಿರಥನಿಗೆ ಸಿಕ್ಕಿ ಮಕ್ಕಳಿಲ್ಲದ ಅವರು ತಮ್ಮ ಮಗುವೆಂದೇ ಸಾಕಿ ಬೆಳೆಸಿದರು. ಆದರೆ ಯುದ್ಧದ ಸಂದರ್ಭದಲ್ಲಿ ಹತ್ತಿರವೇ ಇದ್ದ ಕರ್ಣನನ್ನು ನೋಡಿ ತನ್ನೊಡಲ ಗುಟ್ಟು ಯಾವಾಗಲಾದರೂ ಸ್ಫೋಟಿಸಿಬಿಟ್ಟರೆ ಎಂಬ ಭಯದಿಂದಲೇ ಬದುಕುತ್ತಿದ್ದ ಕುಂತಿಗೆ ಕರ್ಣ ಸೇನೆಯ ನಾಯಕನಾದದ್ದು ಇಷ್ಟವಿರಲಿಲ್ಲ ಅರ್ಜುನನಿಗೆ ಸವಾಲು ಹಾಕುವ ಎದುರಾಳಿಯಾಗಿ ಕರ್ಣ ಕುಂತಿಯ ಕಣ್ಣೆದುರು ಬಂದಾಗ ಕುಂತಿಯ ಕರುಳಲ್ಲಿ ಯಾರೋ ಕೈಯಾಡಿಸಿದ ಅನುಭವ. ಪಾಂಡವರ ಮೇಲಿಟ್ಟ ಪ್ರೀತಿ,

ಮಮತೆಗಳ ಹಿರಿದಾಗಿದ್ದ ಕುಂತಿಗೆ ಕರ್ಣನ ಬಗೆಗೆ ಅವಳು ಸಹಾನುಭೂತಿಯಿಂದ ಆಲೋಚಿಸುವ ಕೆಲಸವನ್ನು ಮಾಡಲಾಗಲಿಲ್ಲ.

ಕರ್ಣ ದುರ್ಯೋಧನನಿಗಾಗಿ ಅವಳ ಗೆಳತನಕ್ಕಾಗಿ ಅವನ ವಿಜಯಕ್ಕಾಗಿ ವೀರಾವೇಶದಿಂದ ಹೋರಾಡುತ್ತಿರುವಾಗ ಶಲ್ಯನ ಚುಚ್ಚುನುಡಿಯಿಂದಾಗಿ ರಥದ ಚಕ್ರ ಹೂತುಹೋದ ಕಾರಣದಿಂದಾಗಿ ಅರ್ಜುನ ಬಾಣಕ್ಕೆ ತುತ್ತಾಗಿ ಮರಣ ಹೊಂದಿದನು.

ಇತ್ತ ಭೀಮಸೇನ ದುಶ್ಯಾಸನನನ್ನು ನೋಡುತ್ತಾ ಹುಚ್ಚನಾಗಿ ಬಿಟ್ಟಿದ್ದ, ದುಶ್ಯಾಸನನ್ನು ಬಾ... ಬಾ... ಎಂದು ಆಹ್ವಾನಿಸುತ್ತಾ ಎದೆಯನ್ನು ಬಗೆದು ಅವನ ರಕ್ತವನ್ನು ಮಗುವೊಂದು ತನಗಿಷ್ಟವಾದುದನ್ನು ಚಪ್ಪರಿಸಿ ಕುಡಿಯುವಂತೆ ಕುಡಿದನು. ಇದನ್ನು ನೋಡಿ ದ್ರೌಪದಿಯ ಕೈಗಳು ಬೆನ್ನ ಮೇಲೆ ಹರಡಿಕೊಂಡಿದ್ದ ತನ್ನ ನೀಳವಾದ ಕಪ್ಪುಕೂದಲನ್ನು ನಿಧಾನವಾಗಿ ಸುತ್ತಿ ಕುತ್ತಿಗೆಯ ಬಳಿ ಗಂಟು ಹಾಕಿ ಭೀಮನನ್ನು ಸಮಾಧಾನಿಸಿದಳು.

ಕುರುಕ್ಷೇತ್ರದ ಹದಿನೆಂಟನೆಯ ದಿನದ ಯುದ್ಧ ಆರಂಭಗೊಂಡಿತ್ತು. ಆ ದಿನದ ಯುದ್ಧದಲ್ಲಿ ಕೌರವ ಸೇನೆ ಸಂಪೂರ್ಣ ಸೋತಿತ್ತು. ದುರ್ಯೋಧನ ಮೊಟ್ಟ ಮೊದಲ ಬಾರಿಗೆ ಪಾಂಡವರೆದುರಿಗೆ ತನ್ನ ದೌರ್ಬಲ್ಯವನ್ನು ಒಪ್ಪಿಕೊಳ್ಳುವಂತೆ ಕುರುಕ್ಷೇತ್ರದಿಂದ ಈ ವಿಷಯ ತಿಳಿದ ಪಾಂಡವರು ಸರೋವರದ ಬಳಿಗೆ ಬಂದು ದುರ್ಯೋಧನನ್ನು ಮೂದಲಿಸಿದಾಗ ಸರೋವರದಿಂದ ಎದ್ದು ಬಂದ ದುರ್ಯೋಧನ ಭೀಮನೊಂದಿಗೆ ಯುದ್ಧ ಮಾಡಲು ಸಿದ್ಧನಾದನು. ಇವರಿಬ್ಬರ ನಡುವೆ ಗದಾಯುದ್ಧ ಆರಂಭವಾಯಿತು. ಮದಿಸಿದ ಕಾಡಾನೆಗಳು, ಹಸಿದ ಕಾಡುಮೃಗಗಳು ಹೋರಾಟ ಮಾಡುವಂತೆ ಇಬ್ಬರ ಹೋರಾಟವೂ ಸರಿ ಸಮಾನವಾಗಿ ನಡೆದಿದ್ದವು. ದುರ್ಯೊಧನನ ಪ್ರಹಾರಗಳು ಅತ್ಯಂತ ನಿಖರವಾಗಿದ್ದವು, ಖಚಿತವಾಗಿದ್ದವು. ಈ ಹೊಡೆತದಿಂದಾಗಿ ಭೀಮಸೇನ ಎರಡು–ಮೂರು ಬಾರಿ ಮೂರ್ಛೆಯೂ ಹೋಗಿದ್ದ ಗದಾಯುದ್ಧದಲ್ಲಿ ತೊಡೆಯ ಭಾಗಕ್ಕೆ ಏಟು ಹಾಕುವುದು ಅಧರ್ಮ ಎಂದು ತಿಳಿದಿದ್ದರೂ ಕೃಷ್ಣನ ಸನ್ನೆಯಿಂದ ಭೀಮನು ದುರ್ಯೋಧನ ತೊಡೆಗೆ ಬಲವಾಗಿ ಹೊಡೆದು ತೊಡೆ ಮುರಿದು ಅವನನ್ನು ಕೊಂದನು.

ಇತ್ತ ಕುರುಕ್ಷೇತ್ರ ಯುದ್ಧಕ್ಕಾಗಿ ಬಂದಿದ್ದ ಕಾಶೀರಾಜಕುಮಾರ ಯುದ್ಧದಲ್ಲಿ ಮರಣ ಹೊಂದಿದ್ದನು. ಈ ವಿಷಯ ತಿಳಿದ ಕಾಶೀರಾಜನ ಪತ್ನಿ ಅಭಿಲಾಷಾದೇವಿ ಹುಚ್ಚಿಯಾದಳು. ಹಾಗೆಯೇ ಕಾಶೀಯ ಸಾಮಂತ ದೊರೆ ಚಂದ್ರಸೇನ ಯುದ್ಧದಲ್ಲಿ ಕಾಲನ್ನು ಕಳೆದುಕೊಂಡನು. ತನ್ನ ಗಂಡನ ಕಾಲು ಸರಿಪಡಿಸಲು ಶಿಬಿರದ ವೈದ್ಯನಿಗೆ ಮೈಮೇಲಿದ್ದ ಬಂಗಾರವನ್ನು ಕೊಟ್ಟ. ತನ್ನ ಮಾನವನ್ನು ಉಳಿಸಿಕೊಳ್ಳಲು ಚಂದ್ರಸೇನನ ಹೆಂಡತಿ ರೋಹಿಣಿ ತನ್ನ ಗಂಡನೊಂದಿಗೆ ಶಿಬಿರವನ್ನು ಬಿಟ್ಟು ಹೊರನಡೆದಳು. ಇವಳಿಗೆ ಸಹಾಯಕನಾಗಿ ನಿಂತವನೇ ಕಾಳ ಶಂಭು.

ಈತ ಕೂಡ ಯುದ್ಧದಿಂದ ನೊಂದಿದ್ದ. ತನ್ನ ಮಗಳ ಮದುವೆಯ ಸಲುವಾಗಿ ಹಣಸಂಪಾದಿಸುವ ಸಲುವಾಗಿ ಕುರುಕ್ಷೇತ್ರ ಯುದ್ಧಕ್ಕೆ ಬಂದಿದ್ದ ಇವನು ಒಬ್ಬ ಸಾಮಾನ್ಯ ಭಟನಾಗಿದ್ದ. ಇವನು ಬಂದಾಗಿನಿಂದಲೂ ಒಂದು ಕಾಸು ಕೂಡ ಇವನಿಗೆ ದೊರೆತಿರಲಿಲ್ಲ. ಇವನು ಕೂಡ ತನ್ನ ಹೆಂಡತಿ ಮಕ್ಕಳನ್ನು ಕಾಣಲು ಹಪಹಪಿಸುತ್ತಿದ್ದನು. ಕಾಳಶಂಭು ಮತ್ತು ರೋಹಿಣಿ ಕುರುಕ್ಷೇತ್ರ ದಾಟುವುದರೊಳಗೆ ಪಾಂಡವರ ಗೂಢಾಚಾರಿಗಳಿಗೆ ಸಿಕ್ಕಿಬಿದ್ದರು. ಇಲ್ಲಿ ದ್ರೌಪದಿಯೇ ಇವರನ್ನು ಬಿಟ್ಟುಬಿಡುವಂತೆ ಹೇಳಲಾಗಿ ಇಬ್ಬರು ಕುರುಕ್ಷೇತ್ರವನ್ನು ಬಿಟ್ಟು ಕಾಳಶಂಭುವಿನ ಊರಿಗೆ ಹೋದರು. ಆದರೆ ಅಲ್ಲಿ ಕಾಳಶಂಭುವಿನ ಮಗಳನ್ನು ಯಾರೋ ಹೊತ್ತುಕೊಂಡು ಹೋಗಿದ್ದರು. ಅದೇ ದಾರಿಯ ಮಧ್ಯದಲ್ಲೇ ರೋಹಿಣಿಯ ಗಂಡ ಚಂದ್ರಸೇನ ಪ್ರಾಣಬಿಟ್ಟನು. ತನ್ನ ಗಂಡನ ಉಳಿವಿಗಾಗಿ ಕೊನೆಯ ಎಲ್ಲಾ ಪ್ರಯತ್ನವನ್ನು ಮಾಡಿ ಗಂಡ ಉಳಿಯದೆ ಹೋಗಿದ್ದಕ್ಕೆ ದುಃಖಿಸಿ ಕಾಳಶಂಭುವಿನ ಜೊತೆ ಕಳೆದು ಹೋದ ಮಗಳಂತೆ ವಾಸಿಸತೊಡಗಿದ್ದಳು ಆದರೂ ಅಭಿಲಾಷ, ರೋಹಿಣಿ, ಕಾಳಶಂಭು ಇವರು ಕುರುಕ್ಷೇತ್ರ ಯುದ್ಧವನ್ನು ಬೇರೆ ಬೇರೆ ಬಗೆಯಾಗಿ ವಿರೋಧಿಸುತ್ತಿದ್ದರು. ಇವರ ವಿರೋಧ ಅವರ ಉಳಿಯುವಿಕೆಗಾಗಿ ಅವರ ಗಂಡ, ಮಗಳ ಉಳಿಯುವಿಕೆಗಾಗಿ ಆಗಿತ್ತು. ಆದರೂ ಈ ಮೂವರು ಕಾದಂಬರಿಯಲ್ಲಿ ಯುದ್ಧ ವಿರೋಧ ನೀತಿಯನ್ನು ಹೇಳಿದರು.

ಹದಿನೆಂಟು ದಿನಗಳ ಕುರುಕ್ಷೇತ್ರ ಮಹಾಯುದ್ಧ ಕೌರವರ ಹನ್ನೊಂದು ಅಕ್ಷೌಹಿಣಿ ಸೈನ್ಯ ಪಾಂಡವರ ಏಳು ಅಕ್ಷೌಹಿಣಿ ಸೈನ್ಯದ ಸಂಪೂರ್ಣ ನಾಶ. ಎಲ್ಲಿ ನೋಡಿದರೂ ಮನುಷ್ಯರ ಆನೆಗಳ, ಕುದುರೆಗಳ ಹೆಣಗಳ ದೊಡ್ಡ ದೊಡ್ಡ ರಾಶಿಗಳು ಕೃಷ್ಣ ಧರ್ಮರಾಯನಿಗೆ ಸಾಮೂಹಿಕ ಅಂತ್ಯಸಂಸ್ಕಾರ ಮಾಡಲು ಹೇಳಿದ್ದನು.

ಕೌರವರ ಕಡೆಯ ಪ್ರಮುಖ ವೀರರ ಸಂಸ್ಕಾರ ನಡೆಸಿ ತರ್ಪಣ ಬಿಡಲು ಪಾಂಡವರು, ದೃತರಾಷ್ಟ್ರ, ಗಾಂಧಾರಿಯನ್ನು ಕರೆ ತಂದಿದ್ದರು. ಜೊತೆಗೆ ಭಾನುಮತಿ, ವಿದುರ ಸಂಜಯ ಮುಂತಾದವರು ಬಂದಿದ್ದರು. ಸಾವಿರಾರು ಹೆಣಗಳನ್ನು ನೂರಾರು ಗುಡ್ಡೆಗಳನ್ನಾಗಿಸಿ ಬೆಂಕಿ ಇಡುವ ಕಾರ್ಯ ಭರದಿಂದ ಸಾಗಿತ್ತು. ಆದರೆ ಈ ಸಮಯದಲ್ಲಿ ಅಧಿರಥ ಕೈ ಮುಗಿದು ಧರ್ಮರಾಯನಲ್ಲಿ ಕರ್ಣ ನನ್ನ ಕಂದ ಅವನಿಗೆ ನಾನೇ ಸಂಸ್ಕಾರ ಮಾಡಬೇಕೆಂದು ಕೇಳಿಕೊಂಡನು. ಅವನ ವೀರತ್ವಕ್ಕೆ ತಕ್ಕ ರೀತಿಯಲ್ಲಿ ನಾವೇ ಸಂಸ್ಕಾರ ಮಾಡುತ್ತೇವೆ ಎಂದು ಧರ್ಮರಾಯ ನುಡಿದ.

ಬೇಡಿರಿ ದೊರೆ ಬದುಕಿರುವ ತನಕ ಸೂತಪುತ್ರ ಸೂತಪುತ್ರ ಎಂದು ನನ್ನ ಮಗನನ್ನು ನೀವೆಲ್ಲರೂ ತುಚ್ಛೀಕರಿಸುತ್ತಾ, ದೂರೀಕರಿಸುತ್ತಾ ಬಂದವರು. ನನ್ನ ಮಗನಿಗೆ ನೀವು ಸಂಸ್ಕಾರ ಮಾಡಿದರೆ ಅವನ ಆತ್ಮ ಖಂಡಿತ ಅಳುತ್ತದೆ ಒಡೆಯಾ ಇದು ಸತ್ಯ. ಹೀನ

ಜಾತಿಯವನಿಂದ ಇಂಥದೇ ಮಾತುಗಳನ್ನು ಕೇಳುತ್ತಾ ನಿಲ್ಲಲು ಧರ್ಮರಾಯನಿಗೆ ಮನಸ್ಸಾಗದೆ ಸಂಸ್ಕಾರ ಮಾಡಲು ಅಪ್ಪಣೆ ಕೊಟ್ಟು ಬಿಟ್ಟಿದ್ದ.

"ಕೂಡದು ಕೂಡದು ಕರ್ಣನ ಶವಸಂಸ್ಕಾರದ ಹಕ್ಕು ನಿನ್ನದಲ್ಲ, ನಮ್ಮದು ಧರ್ಮರಾಯನದು, ಅರ್ಜುನನದು, ಭೀಮನದು, ಸಹದೇವ-ನಕುಲರದು" ಹುಚ್ಚಿಯಂತೆ ಕುಂತಿ ತಡೆಯಲು ಮುಂದೆ ಹೋಗಿದ್ದಳು. "ಅತ್ತೆ.... ಅತ್ತೆ.... ಸಮಾಧಾನಗೊಳ್ಳಿರಿ" ದ್ರೌಪದಿ ಅವಳನ್ನು ಸಂತೈಸತೊಡಗಿದ್ದಳು. ಇಲ್ಲ ದ್ರೌಪದಿ ಈಗಲಾದರೂ ನನ್ನ ಒಡಲಲ್ಲಿ ಕುದಿಯುತ್ತಿರುವ ಸತ್ಯವನ್ನು ಹೊರಗೆ ಹಾಕಿ ಬಿಡುತ್ತೇನೆ. ಅಧಿರಥ, ಕರ್ಣ ನನ್ನ ಮಗ ಕನ್ಯೆತನದ ತಾಯ್ತನಕ್ಕೆ ಹೆದರಿ ಗಂಗೆಯಲ್ಲಿ ನಾನು ತೇಲಿ ಬಿಟ್ಟ ಮಗು. ಧರ್ಮರಾಯ ನಿಮ್ಮೆಲ್ಲರಿಗೂ ಕರ್ಣ ಅಣ್ಣ. ಪಾಂಡವನಲ್ಲದಿದ್ದರೂ ಅವನು ಕೌಂತೇಯ. ಅವನ ಸಂಸ್ಕಾರದ ಹಕ್ಕು ನನ್ನದು, ನಮ್ಮೆಲ್ಲರದು" ಅಳುತ್ತಾ ಕುಂತಿ ನುಡಿದಳು.

"ಧಿಕ್ಕಾರ ಇರಲಿ ಹೆಣ್ಣುಗಳಿಗೆ, ಧಿಕ್ಕಾರ ಇರಲಿ ಹೆಣ್ತನಕ್ಕೆ" ಧರ್ಮರಾಯ ಅತ್ಯಂತ ಕೋಪದಿಂದ ತಾಯಿಯನ್ನು ಹಳಿದುಬಿಟ್ಟಿದ್ದನು.

"ಒಂದು ಮಾತು ಒಂದೇ ಒಂದು ಮಾತು... ಕರ್ಣ ನಮ್ಮೆಲ್ಲರ ಹಿರಿಯನೆಂದು ಒಮ್ಮೆ ಹೇಳಿಬಿಟ್ಟಿದ್ದರೆ..." ಧರ್ಮರಾಯ ಹಲುಬಿಕೊಂಡಿದ್ದ.

"ಹೇಳಿಬಿಟ್ಟಿದ್ದರೆ....? ದ್ರೌಪದಿ ಅದೇ ಪದವನ್ನು ಪ್ರಶ್ನೆಯ ಭಾವ ತೋರಿದ್ದಳು.

ಈ ಕುರುಕ್ಷೇತ್ರ ಯುದ್ಧವನ್ನೇ ಆಗಗೊಡುತ್ತಿರಲಿಲ್ಲ. ಇಡೀ ರಾಜ್ಯವನ್ನು ಕರ್ಣನಿಗೆ ಒಪ್ಪಿಸಿ ಬಿಡುತ್ತಿದ್ದೆ. ಕರ್ಣನ ಗೆಳೆಯನಾದ ದುರ್ಯೋಧನನೂ ಅದನ್ನು ಒಪ್ಪಿಕೊಂಡು ನಮ್ಮ ಮೇಲಣ ದ್ವೇಷ. ವೈರತ್ವಗಳನ್ನು ಮರೆತು ಒಂದುಗೂಡಿ ಬಾಳುತ್ತಿದ್ದ, ಅಯ್ಯೋ ತನ್ನದೊಂದು ತಪ್ಪಿನ ಸಣ್ಣ ಹಳ್ಳವನ್ನು ಮುಚ್ಚಿಕೊಳ್ಳಲು ಹೋಗಿ ಇಡೀ ಭೂಮಿಯನ್ನೇ ನುಂಗಿ ಹಾಕುವ ಕುರುಕ್ಷೇತ್ರದಂತಹ ಮಹಾ ಕಮ್ಮರಿಗೆ ಕಾರಣಳಾಗಿ ಬಿಟ್ಟಳು ಅಮ್ಮಾ.

ಅತ್ತೆ ನಾನೊಂದು ಮಾತು ಹೇಳತ್ತೇನೆ ಕೇಳುತ್ತೀರಿ ತಾನೆ.... ಈ ಕುರುಕ್ಷೇತ್ರದ ನಡುವೆ ಸಂಬಂಧಗಳಿಗೆ ಅರ್ಥವೇ ಇಲ್ಲ ಎನಿಸುತ್ತಿದೆ. ತಾಯಿ-ಮಗ, ಗಂಡ-ಹೆಂಡತಿ, ಅಣ್ಣ-ತಮ್ಮಂದಿರು... ಇವುಗಳಿಗೆಲ್ಲಾ ಅರ್ಥ ಏನಾದರೂ ಇದ್ದಿದ್ದರೆ... ಈ ಕುರುಕ್ಷೇತ್ರ ನಡೆಯುತ್ತಲೇ ಇರಲಿಲ್ಲ ಎಂದೆನಿಸುವುದಿಲ್ಲವಾ ನಿಮಗೆ? ಕರ್ಣನ ಸಂದರ್ಭದಲ್ಲಿ ಅವನು ಬದುಕಿರುವಾಗ ಅವನಿಗೆ ಏನನ್ನೂ ಕೊಡಲಾಗದ ನಮಗೆ ಸಾವಿನ ಅನಂತರದ ಸಂಸ್ಕಾರದಲ್ಲಿ ಯಾವ ಬಗೆಯ ಹಕ್ಕು ಸಾಧಿಸಲು ಸಾಧ್ಯ ಹೇಳಿ? ಲೋಕವೇ ಅರಿತಂತೆ ಅಧಿರಥ ಕರ್ಣನನ್ನು ಸಾಕಿದ ಸಲಹಿದ ಗಂಗೆಯಷ್ಟೇ ಪವಿತ್ರವಾದ ಪ್ರೀತಿ, ವಾತ್ಸಲ್ಯಗಳನ್ನು ಧಾರೆಯೆರೆದ ಮಗನ

ಸಾವಿನಿಂದಾಗಿ, ಸಂಸ್ಕಾರಕ್ಕಾಗಿ ಅಷ್ಟು ದೂರದಿಂದ ಇಂತಹ ಯುದ್ಧದ ಸಂದರ್ಭದಲ್ಲಿಯೂ ಸಾಗಿ ಬಂದಿದ್ದಾನೆ. ಅವನಿಗೆ ಕರ್ಣನ ಮೇಲಿನ ಎಲ್ಲಾ ಹಕ್ಕುಗಳೂ ಸಲ್ಲುತ್ತವೆ ಎಂಬ ಮಾತಿಗೆ ಕುಂತಿ ಮೌನವಾಗಿ ತಲೆಯಾಡಿಸಿದ್ದಳು.

ಕರ್ಣನ ಸಂಸ್ಕಾರ ಎಲ್ಲಕ್ಕಿಂತ ಭಿನ್ನವಾಗಿತ್ತು. ಅಧಿರಥ ಅಳುತ್ತಿದ್ದ ಮಗನ ಗುಣಗಾನ ಮಾಡುತ್ತಿದ್ದ. ಬದುಕು ಅವನಿಗೆ ಮಾಡಿದ ಅನ್ಯಾಯಗಳ ಬಗೆಗೆ ಶೋಕ ವ್ಯಕ್ತಪಡಿಸುತ್ತಾ ದೇಹವನ್ನು ಒಟ್ಟುಗೂಡಿಸಿ ಬೆಂಕಿ ಇಟ್ಟು ಸೂರ್ಯನ ಕಡೆಗೆ ಮುಖ ಮಾಡಿ ನಿಂತು ಬಿಟ್ಟಿದ್ದ.

ದ್ರೌಪದಿಯ ಮಾತಿನಂತೆ ಅಭಿಲಾಷಾ ಹುಚ್ಚಿಯಾದ ನಂತರ ತನ್ನ ಗಂಡನನ್ನು ಉಳಿಸಿಕೊಳ್ಳಲು ಕಾಳಶಂಭುವಿನೊಂದಿಗೆ ಬಂದ ರೋಹಿಣಿ ಮಾರ್ಗ ಮಧ್ಯೆದಲ್ಲಿ ಗಂಡನನ್ನು ಕಳೆದುಕೊಂಡು ಬರಿಗೈಯಲ್ಲಿ ತನ್ನ ಗಂಡನಿಲ್ಲದೆ ರಾಜ್ಯಕ್ಕೆ ಮರಳಲು ಇಷ್ಟವಾಗದೆ ಕಾಳಶಂಭುವಿನ ಮಗಳಾಗಿ, ಸತ್ತ ಮಗಳ ಸ್ಥಾನವನ್ನು ತುಂಬಿದ್ದಳು. ಯುದ್ಧದಲ್ಲಿ ಮಡಿದ ವೀರ ಮಡದಿಗೆ ಪರಿಹಾರ ಧನ ನೀಡುವುದಾಗಿ ತಿಳಿದ ಕಾಳಶಂಭು ರೋಹಿಣಿ ಅದನ್ನು ತಲುಪಿಸಲು, ಅದನ್ನು ಪಡೆಯಲು ಏನೂ ಮಾಡಿದ್ದರು ಸಾಧ್ಯವಾಗಲಿಲ್ಲ. ಕಾಲುಕಳೆದುಕೊಂಡವರ ಪಟ್ಟಿಯಲ್ಲಿರುವ ಚಂದ್ರಸೇನ ಬಂದರೆ ಕಾಲು ಕಳೆದುಕೊಂಡಿದ್ದಕ್ಕೆ ಪರಿಹಾರ ಸಿಗುತ್ತದೆ. ಕುರುಕ್ಷೇತ್ರ ಬಿಟ್ಟು ಎಲ್ಲೋ ಸತ್ತ ವ್ಯಕ್ತಿ ಪರಿಹಾರ ಸಿಗುವುದಿಲ್ಲ ಎಂಬುದು ತಿಳಿದು ರೋಹಿಣಿ ಮತ್ತು ಕಾಳಶಂಭು ಮುಂದೆ ಈ ಪ್ರಯತ್ನ ಮಾಡಹೋಗಲಿಲ್ಲ.

ಧರ್ಮರಾಯನ ಪಟ್ಟಾಭಿಷೇಕಕ್ಕೆ ಹಸ್ತಿನಾವತಿಯಲ್ಲಿ ಭರದ ಸಿದ್ಧತೆಗಳು ನಡೆಯುತ್ತಿವೆ. ಪಾಂಡವರ ಅಳಿದುಳಿದ ಬಂಧು ಬಳಗದವರೆಲ್ಲಾ ಆಗಮಿಸಿದ್ದರು. ಆದರೆ ಪಾಂಡವರ ಪಟ್ಟ ಮಹಿಷಿ ದ್ರೌಪದಿ ಅಲ್ಲಿರಲಿಲ್ಲ. ದ್ರೌಪದಿ ಧರ್ಮರಾಯನೊಂದಿಗೆ ಪಟ್ಟಾಭಿಷಿಕ್ತಳಾಗಲು ನಿರಾಕರಿಸಿದ್ದಳು. ಕೃಷ್ಣ ಭೀಮಾದಿಗಳು ವಿದುರ, ಸಂಜಯ.... ಇತ್ಯಾದಿ ಯಾರ ಮಾತಿಗೂ ಅವಳ ನಿರ್ಧಾರ ಕರಗಿರಲಿಲ್ಲ. ಎಲ್ಲರೂ ಕುಂತಿಯ ಮೊರೆ ಹೋಗಿದ್ದರು. ಕುಂತಿ ಸಒಸೆಯ ನಿರ್ಧಾರದಲ್ಲಿ ಹಸ್ತಕ್ಷೇಪ ಮಾಡಲು ತನಗಾಗದೆಂದು ಬಿಟ್ಟಿದ್ದಳು. ಅಲ್ಲದೆ ಸೊಸೆಯ ನಿರ್ಧಾರವನ್ನು ಮನಸಾರ ಒಪ್ಪಿಯೇ ಆಗಿಬಿಟ್ಟಿತ್ತು.

ಧರ್ಮರಾಯ ಒಂಟಿಯಾಗಿ ಸಿಂಹಾಸನವೇರಿದ್ದ! ಅದೇ ವೇಳೆಗೆ ದ್ರೌಪದಿ ಮಾಳಿಗೆಯ ಮೇಲೆ ಏಕಾಂಗಿಯಾಗಿ ಕುಳಿತು ಹಗಲಿನಾಕಾಶದಲ್ಲಿ ನಕ್ಷತ್ರಗಳನ್ನು ಅರಸುತ್ತಾ... ಕುಳಿತಳು. ಹೀಗೆ ಜಯ ಕಾದಂಬರಿಯೂ ದ್ರೌಪದಿಯ ಏಕಾಂಗಿತನದಿಂದ ಕೊನೆಗೊಳ್ಳುತ್ತದೆ.

**ಜಯ ಕಾದಂಬರಿ**

**ಸನ್ನಿವೇಶ ನಿರ್ವಹಣೆ:**

**ಅ) ಅಭಿಲಾಷಾ ಹುಚ್ಚಿಯಾಗುವ ಸನ್ನಿವೇಶ**

ಕಾಶಿಯ ರಾಜಕುಮಾರ ಅಭಿಭೂನ ಪತ್ನಿಯೇ ಅಭಿಲಾಷ. ಇವಳಿಗೆ ತನ್ನ ಗಂಡ ಕುರುಕ್ಷೇತ್ರ ಯುದ್ಧದಲ್ಲಿ ಭಾಗವಹಿಸಿ ಯುದ್ಧ ಮಾಡಲು ಇಷ್ಟವಿರುವುದಿಲ್ಲ. ಆದರೂ ವೀರತ್ವ ಶೂರತನದ ಮಾತನಾಡಿ ಯುದ್ಧಕ್ಕೆ ಬರುತ್ತಾನೆ. ಮೊದಲ ದಿನ ಯುದ್ಧಕ್ಕೆ ಕಳುಹಿಸುವಾಗ ಆರತಿ ಎತ್ತಿ ಕಳುಹಿಸಿದ ಅಭಿಲಾಷಾ ದೇವರಲ್ಲಿ ಒಂದೇ ಸಮನೆ ಪ್ರಾರ್ಥಿಸುತ್ತಿದ್ದಳು. ತನ್ನ ಗಂಡ ಕ್ಷೇಮವಾಗಿ ಹಿಂದಿರುಗಿ ಬರಲೆಂದು ಹಾಗೆಯೇ ಹಿಂದುರುಗಿ ಬಂದ ಗಂಡನನ್ನು ಅಪ್ಪಿಕೊಂಡಿದ್ದಳು. ಇದು ಹೀಗಿಯೇ ಹಲವಾರು ದಿನಗಳು ನಡೆದವು. ಯುದ್ಧವೆಂದರೆ ಸಾವು–ನೋವು ಎಂದು ತಿಳಿದಿದ್ದ ಅಭಿಲಾಷಾ ತನ್ನ ಗಂಡ ಒಂದು ಸಣ್ಣ ಗಾಯ ಕೂಡ ಆಗದೆ ಬರುತ್ತಿದ್ದುದು ನೋಡಿ ಯುದ್ಧದ ಮೇಲಿನ ಭೀತಿಯನ್ನು ಬಿಟ್ಟು ಸಂತೋಷದಿಂದ ರೋಹಿಣಿಯ ಜೊತೆ ಕಾಲಕಳೆಯುತ್ತಿದ್ದಳು. ಯುದ್ಧಭೂಮಿಯಲ್ಲಿದ್ದರೂ ನಗುವ ಹೂವಿನಂತೆ ಸದಾ ನಗುತ್ತಿದ್ದಳು. ಆದರೆ ಆ ನಗು ಹೆಚ್ಚು ದಿನ ಉಳಿದಿರಲಿಲ್ಲ. ಯುದ್ಧದಲ್ಲಿ ತನ್ನ ಗಂಡ ಮಡಿದ ಸುದ್ಧಿ ಕೇಳಿ ಹುಚ್ಚಿಯಾಗಿ ಬಿಟ್ಟಳು. ಆಗ ಅವಳಿಗೆ ಇದ್ದ ಭ್ರಮನಿರಶನ ನಾಶವಾಯಿತು. ಯುದ್ಧ ಎಂದರೆ ಕೇಡು ಅಪಾರ ಸಾವು–ನೋವು, ಭೂಮಿಯನ್ನು ಬಂಜೆ ಮಾಡುವ ಶಕ್ತಿ ಇದೆ ಎಂಬುದನ್ನು ಲೇಖಕಿ ಅಭಿಲಾಷಾ ಪಾತ್ರದಲ್ಲಿ ತೋರಿಸಿದ್ದಾರೆ.

ಲೇಖಕಿ ಬಹುಶಃ ಮಹಾಭಾರತದಲ್ಲಿ ಇಲ್ಲದ ಪಾತ್ರಗಳನ್ನು ಸೃಷ್ಟಿಸಿರುವ ಕಾರಣವೇ ಯುದ್ಧ ಬೇಡ ಎಂದು. ಯುದ್ಧ ವಿರೋಧಿ ನೀತಿಯನ್ನು ಹೇಳುವುದಾಗಿದೆ ಎನಿಸುತ್ತದೆ.

**ಆ) ಉತ್ತರ ಯುದ್ಧಕ್ಕೆ ಹೋಗುವ ಸನ್ನಿವೇಶ**

ಉತ್ತರ ವಿರಾಟ ರಾಜನ ಮಗ ಯುದ್ಧವೆಂದರೆ ಮಾರು ದೂರ ಓಡಿ ಹೋಗಿಬಿಡುವ. ಉತ್ತರ ಕುರುಕ್ಷೇತ್ರ ಯುದ್ಧಕ್ಕೆ ಎಲ್ಲರಿಗಿಂತ ಮುಂಚೆ ಬಂದಿದ್ದ. ಕೌರವರು ವಿರಾಟರಾಜನ ಗೋಗ್ರಹಣ ಮಾಡಿದ ಸಂದರ್ಭ ಯುದ್ಧ ಭೂಮಿಯಿಂದ ಓಡಿಹೋಗಲು ಯತ್ನಿಸಿದ ಉತ್ತರ. ಹೆಣ್ಣು ಮಕ್ಕಳೊಂದಿಗೆ ಇದ್ದು, ಅವರಲ್ಲಿ ಮಾತ್ರ ತನ್ನ ಪೌರುಷವನ್ನು ಹೊಗಳಿಕೊಳ್ಳುತ್ತಿದ್ದ ಉತ್ತರ. ಯುದ್ದಕ್ಕೆ ಆಗಮಿಸಿರುವುದು ದ್ರೌಪದಿಗೆ ಅಚ್ಚರಿಯನ್ನು ಉಂಟುಮಾಡಿತ್ತು.

"ಯುದ್ಧ ಬೇಡ' ಎನ್ನುವುದನ್ನು ನೀವೂ ತಮಾಷೆ ಮಾಡುತ್ತಿರಲ್ಲ, ಏನೇ ಇರಲಿ ಎಂದಿಗೂ ಯಾವೊಂದು ಸಮಸ್ಯೆಗಳಿಗೂ ಯುದ್ಧ ಪರಿಹಾರವಲ್ಲ, ಬೆತ್ತಲೆ ರಾಜ್ಯದಲ್ಲಿ ಬಟ್ಟೆ ಉಟ್ಟವರೇ ಹುಚ್ಚರು ಎನ್ನುವಂತೆ ನಾನೊಬ್ಬ ಹೇಡಿಯಾಗಿ ಎಲ್ಲರ ನಗುವಿಗೆ ಗುರಿಯಾಗಿದ್ದೇನೆ

ಅಷ್ಟೆ" ಎಂದು ದ್ರೌಪದಿಯೊಂದಿಗೆ ಮಾತುಕತೆ ನಡೆಸಿ ದ್ರೌಪದಿಯ ಪಾದಗಳಿಗೆ ವಂದಿಸಿದಾಗ 'ವಿಜಯಿಯಾಗು ಕುಮಾರ?' ಎಂದು ಹರಿಸಿದ್ದಳು. "ಬೇಡಿ ಬೇಡಿ ದಯವಿಟ್ಟು ಹಾಗೆ ಹರಸಬೇಡಿ" ಯುದ್ಧ ಬೇಕು ಬೇಕು ಎನ್ನುವವರು ವಿಜಯಿಗಳಾಗಿ ಉಳಿಯಲಿ. ಉಳಿದು ಯುದ್ಧದ ರುದ್ರತಾಂಡವವನ್ನು ನೋಡಿಯಾದರೂ ಯುದ್ಧ ವಿರೋಧಿ ನಿಲುವು ತಾಳುವಂತಾಗಲಿ, ಕುರುಕ್ಷೇತ್ರ ಯುದ್ಧದ ಮೊದಲ ಪರಾಜಯ, ಮೊದಲ ಮರಣ ನನಗೆ ಬರಲೆಂದು ಹಾರೈಸಿರಿ ಎಂದು ನುಡಿದಿದ್ದನು.

ಮೊದಲು ಯುದ್ಧವೆಂದರೆ ಓಡುವ ಹುಡುಗ, ಯುದ್ಧಮಾಡಲು ಬಂದು ಅದರಿಂದಾಗುವ ನೋವುಗಳನ್ನು ತಿಳಿಸುತ್ತಿದ್ದರೆ ನಿಜವಾಗಿಯೂ ಇವನು ಮಾವನತಾವಾದಿಯಾಗಿ ಕಾಣುವಂತಹನಾಗುತ್ತಾನೆ. ಲೇಖಕಿ ಉತ್ತರ ಪಾತ್ರಕ್ಕೂ ಮಹತ್ವ ನೀಡಿ ಈ ಪಾತ್ರದ ಮೂಲಕ ಯುದ್ಧ ವಿರೋಧಿ ನಿಲುವನ್ನು ಪ್ರತಿಪಾದಿಸುತ್ತಿದ್ದಾರೆ.

**ಇ) ಗಾಂಧಾರಿ ಅಂತರಾಳ**

ಮಹಾಭಾರತದಲ್ಲಿ ಹೆಚ್ಚು ಪ್ರಾಮುಖ್ಯತೆ ಪಡೆಯದೆ ಉಳಿದ ಪಾತ್ರವನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ಬರೆಯತೊಡಗಿರುವ ಲೇಖಕಿಯ ಪ್ರಯತ್ನಕ್ಕೆ ಗಾಂಧಾರಿಯ ಪಾತ್ರ ಕನ್ನಡಿಯಂತಿದೆ. ಲೇಖಕಿ ದೃಷ್ಟಿಯಲ್ಲಿ ಇಂದಿನ ಮಹಿಳೆಯಂತೆಯೇ ಗಾಂಧಾರಿಯ ಮನಸ್ಸನ್ನು ಅಂದೂ ತನ್ನನ್ನು ತಾನೇ ಪ್ರಶ್ನೆ ಮಾಡಿಕೊಂಡ ಬಗೆಯನ್ನು ತಿಳಿಸುತ್ತದೆ. ಇದುವರೆಗೂ ಯೋಚಿಸಲಾರದಂತಹ ಒಂದು ಸತ್ಯವನ್ನು ಲೇಖಕಿ ಈ ಪಾತ್ರದಲ್ಲಿ ಹೇಳ ಹೊರಟಿದ್ದಾರೆ.

ಗಾಂಧಾರಿಯ ಅಪ್ಪ, ಭೀಷ್ಮನ ಮೇಲಿನ ಭಯ, ಹೆದರಿಕೆಯಿಂದಾಗಿ ಮನೆತನದ ಗೌರವದಿಂದಾಗಿ ಗಾಂಧಾರಿಯನ್ನು ದೃತರಾಷ್ಟ್ರನಿಗೆ ಕೊಟ್ಟು ವಿವಾಹ ಮಾಡುತ್ತಾನೆ. ವಿವಾಹದ ದಿನವೇ ಏಳು ಜೀರಿಗೆಯನ್ನು ಅಡ್ಡಾದಿಡ್ಡಿಯಾಗಿ ಎಸೆಯುತ್ತಿದ್ದ ಧೃತರಾಷ್ಟ್ರನನ್ನು ನೋಡಲು ಬಯಸಿ ಮಧುಮಗಳ ಸಂಕೋಚವನ್ನು ಬದಿಗಿಟ್ಟು ಧೃತರಾಷ್ಟ್ರನನ್ನು ನೋಡುತ್ತಾಳೆ. ಧೃತರಾಷ್ಟ್ರ ಹುಟ್ಟು ಕುರುಡನಾಗಿರುತ್ತಾನೆ. ಈ ದೃಶ್ಯವನ್ನು ನೋಡಲು ತನ್ನಿಂದ ಸಾಧ್ಯವಿಲ್ಲ ಎಂಬಂತೆ ಕಣ್ಣನ್ನು ಮುಚ್ಚಿಕೊಂಡಳು. ಆದರೆ ಅಲ್ಲಿ ನೆರೆದಿದ್ದ ಜನರು ಬಂಧುಬಳಗದವರೂ ತನ್ನ ಗಂಡನಿಗೆ ಇಲ್ಲದ ಸೌಭಾಗ್ಯ ತನಗೂ ಬೇಡ ಎಂಬಂತೆ ತನ್ನ ಕಣ್ಣನ್ನು ತಾನೇ ಹಿಂಗಿಸಿಕೊಂಡಿದ್ದಳು. ಎಂತಹ ಪ್ರತಿವ್ರತೆ ಎಂದು ಹೊಗಳಿದರೂ ಆ ಕ್ಷಣಕ್ಕೆ ತನ್ನ ಗಂಡನನ್ನು ನೋಡಲು ಇಷ್ಟಪಡದೆ ಮುಚ್ಚಿಕೊಂಡ ಕಣ್ಣನ್ನು ಸಮಾಜ ಜೀವನ ಪೂರ್ತಿ ಹಾಗೆಯೇ ಇರುವಂತೆ ಮಾಡಿಬಿಟ್ಟಿತ್ತು. ಲೇಖಕಿ ನಿಜವಾಗಿಯೂ ಇಲ್ಲಿ ಗಾಂಧಾರಿಯ

ಒಳಮನಸ್ಸನ್ನು ಅರ್ಥ ಮಾಡಿಕೊಂಡಂತೆ ಅವಳ ಮನಸ್ಸಿನ ಮಾತುಗಳನ್ನು ಹೇಳುತ್ತಿರುವುದು ಅವರ ಕಾವ್ಯ ರಚನೆಯ ಸಾಮರ್ಥ್ಯವನ್ನು ಮೆಚ್ಚುವಂಥದ್ದು ಆಗಿದೆ.

**ಈ) ಕುಂತಿಯ ಪಾಪಪ್ರಜ್ಞೆ**

ಪಾಂಡವರ ತಾಯಿಯಾದ ಕುಂತಿ ತನ್ನ ಒಡಲೊಳಗೆ ಬೆಂಕಿಯನ್ನು ಇಟ್ಟುಕೊಂಡು ಅದನ್ನು ಯಾರಿಗೂ ಹೇಳದೆ ಬದುಕು ಸವೆಸಿದ ಹೆಣ್ಣು. ಕುಂತಿ ಧರ್ಮವಂತೆಯಾಗಿದ್ದಳು, ತನ್ನ ಮಕ್ಕಳಿಗೆ ಸಂಸ್ಕಾರವನ್ನು ಹೇಳಿಕೊಟ್ಟು ಉತ್ತಮ ತಾಯಿಯಾಗಿ ನಿಂತ ತಾಯಿ ತನ್ನ ಮಕ್ಕಳಿಗಾಗಿ ಸರ್ವವನ್ನು ತ್ಯಾಗ ಮಾಡುತ್ತಾಳೆ. ಅವಳು ಗುಣಸಂಪನ್ನಳಾಗಿರುತ್ತಾಳೆ, ಅದೇ ತಾಯಿ ಇನ್ನೊಂದು ಕಡೆ ತಾನೇ ಹೆತ್ತ ಮಗುವನ್ನು ಸಮಾಜಕ್ಕೆ ಹೆದರಿ ಗಂಗೆಯಲ್ಲಿ ತೇಲಿಬಿಟ್ಟು ಮಗುವಿನ ಬಗೆಗೆ ಕಿಂಚಿತ್ತೂ ಯೋಚಿಸದೆ ಇರುವ, ಕರ್ಣ ತನ್ನ ಮಗ ಎಂದು ತಿಳಿದಿದ್ದರೂ ಅದನ್ನು ಹೇಳದೆಯೇ ಮುಚ್ಚಿಡುವ ತಾಯಿಯಾಗುತ್ತಾಳೆ. ಅಲ್ಲದೆ ಪಾಂಡವರನ್ನು ರಕ್ಷಿಸುವ ಸಲುವಾಗಿ ಕರ್ಣನಲ್ಲಿ ಅವರ ತಲೆ ಕಾಯುವಂತೆ ಕೇಳಿಕೊಂಡು ಬರುತ್ತಾಳೆ. ತಾನೇ ಹೆತ್ತ ಮಗ ಕರ್ಣನ ಹಿತ ಕಾಯುವ ಒಂದೇ ಒಂದು ಕೆಲಸವನ್ನೂ ಕೂಡ ಮಾಡದೆ ಅವನಿಂದಲೇ ಸಹಾಯ ಪಡೆಯುವ ತಾಯಿಯಾಗಿ ನಿಲ್ಲುತ್ತಾಳೆ. ಕುಂತಿ ತನ್ನ ಜೀವನದಲ್ಲಿ ಇಂತಹದೊಂದು ಘಟನೆ ನಡೆದೆ ಇಲ್ಲ ಎಂಬಂತೆ ಗುಣಸಂಪನ್ನೆಯಾಗಿ ಹೊರನೋಟಕ್ಕೆ ಕಂಡರೂ ಅವಳ ಒಳಗೆ ಇರುವ ಗುಣವನ್ನು ಹೊರಹಾಕದೆ ಇರುವುದು ಅವಳು ಸಮಾಜಕ್ಕೆ ಹೆದರುತ್ತಿದ್ದ ಸ್ತ್ರೀಯಾಗಿ ಕಂಡುಬರುತ್ತಾಳೆ. ಕೊನೆಗೆ ಮಕ್ಕಳ ಮುಂದೆ ನಿಜ ಹೇಳಿ, ಧರ್ಮರಾಯನ ತಿರಸ್ಕಾರಕ್ಕೆ ಕಾರಣವಾಗಿ, ಇಡೀ ಸ್ತ್ರೀಕುಲವನ್ನು ತನ್ನ ಮಗ ನಿಂದಿಸಲು ಕಾರಣಳಾಗುತ್ತಾಳೆ.

**ಉ) ರೋಹಿಣಿ ತನ್ನ ಗಂಡನ ಉಳಿವಿಗಾಗಿ ಹೋರಾಡುವ ಸನ್ನಿವೇಶ**

ರೋಹಿಣಿಯ ಪಾತ್ರವನ್ನು ಹೊಸದಾಗಿ ಸೃಷ್ಟಿಸಿರುವ ಲೇಖಕಿ ಒಬ್ಬ ಸಾಮಾನ್ಯ ಹೆಣ್ಣು ತನ್ನ ಗಂಡನ ಉಳಿವಿಗಾಗಿ ಎಂತೆಂತಹ ಕೆಲಸ ಮಾಡುತ್ತಾಳೆ, ಹೇಗೆ ಯುದ್ಧವನ್ನು ವಿರೋಧಿಸುತ್ತಾಳೆ ಎಂಬುದನ್ನು ಈ ಪಾತ್ರದ ಮೂಲಕ ತಿಳಿಸಹೊರಟಿದ್ದಾರೆ.

ರೋಹೀಣಿ ಕಾಶೀ ರಾಜ್ಯದ ಸಾಮಂತ ದೊರೆಯಾದ ಚಂದ್ರಸೇನನ ಹೆಂಡತಿ. ಕುರುಕ್ಷೇತ್ರ ಯುದ್ಧದಲ್ಲಿ ಕಾಲುಗಳನ್ನು ಕಳೆದುಕೊಂಡು ಪಾಳಯಕ್ಕೆ ಮರಳಿದ. ತನ್ನ ಗಂಡ ಅಭಿಲಾಷಾಳ ಗಂಡ ಹಾಗೆ ಪ್ರಾಣ ಕಳೆದುಕೊಳ್ಳಲಿಲ್ಲವಲ್ಲ ಎಂದು ಸಮಾಧಾನಪಟ್ಟಿದ್ದಳು. ಆದರೆ ಚಂದ್ರಸೇನನ ಪರಿಸ್ಥಿತಿ ದಿನದಿಂದ ದಿನಕ್ಕೆ ಹದಗೆಡಲಾರಂಭಿಸಿತ್ತು. ಅಪಾರ ಜ್ವರ, ನಂಜೇರಿದ ಕಾಲು, ಸರಿಯಾದ ಚಿಕಿತ್ಸೆ ದೊರೆಯದೆ ಇರುವುದರಿಂದ ರೋಹೀಣಿ ತನ್ನ ಗಂಡನನ್ನು ಉಳಿಸಿಕೊಳ್ಳಲು ಶಿಬಿರದ ವೈದ್ಯರಲ್ಲಿಗೆ ಹೋಗಬೇಕಾಗಿತ್ತು. ಅವನ ಬಳಿ

ಯಾವಾಗಲೂ ಯಾವ ಔಷಧಿಗಳೂ ಇಲ್ಲ ಎಂಬ ಉತ್ತರವೇ ಬರುತ್ತಿತ್ತು. ರೋಹಿಣಿ ಪ್ರತಿಬಾರಿಯೂ ತನ್ನ ಒಂದೊಂದು ಒಡವೆಯನ್ನು ನೀಡಿ ಚಿಕಿತ್ಸೆ ಕೊಡಿಸಿದರೂ ಗುಣವಾಗುವಂತೆ ಕಾಣದ ಕಾರಣ ಕಾಲನ್ನು ತೆಗೆದುಬಿಡಬೇಕು ಎಂದೂ ಅದಕ್ಕೆ ಹೆಚ್ಚು ವೆಚ್ಚವಾಗುತ್ತದೆ ಎಂದು ನುಡಿದ ಶಿಬಿರದ ವೈದ್ಯನ ಮಾತುಕೇಳಿ ಒಡವೆ ಕೊಡಲು ಕುತ್ತಿಗೆ ಕೈ ಹಾಕಿದರೂ ಅಲ್ಲಿ ಯಾವ ಒಡವೆಯೂ ಇರುವುದಿಲ್ಲ. ತನ್ನ ಗಂಡನ ಉಳಿವಿಗಾಗಿ ತನ್ನ ಮಾಂಗಲ್ಯವನ್ನು ಸಹ ವೈದ್ಯನಿಗೆ ನೀಡಿದ್ದಳು. ವೈದ್ಯನ ವಕ್ರನೋಟ ಇವಳ ದೇಹದ ಮೇಲೆ ಬಿದ್ದಾಗ ಇವಳು ಬಿಡಾರ ಬಿಡುವ ನಿರ್ಧಾರ ಮಾಡಿ, ಕಾಳಶಂಭುನ ಜೊತೆ ರಥವೇರಿ ರಾಜ್ಯಕ್ಕೆ ತಲುಪಿದರೆ ಸಾಕು ಎಂಬಂತೆ ಹೊರಟಿದ್ದರು. ಆದರೆ ಧರ್ಮರಾಯನ ಗೂಢಾಚಾರಿಗಳು ಇವರನ್ನು ಬಂಧಿಸಿ ಪುನಃ ಪಾಂಡವರ ಪಾಳೆಯಕ್ಕೆ ಕರೆತಂದರು. ಇವರನ್ನು ಆಚೆ ಒಯ್ಯಿರಿ ಎಂದು ಧರ್ಮರಾಯ ಹೇಳಿದರೂ ದ್ರೌಪದಿ ರೋಹಿಣಿಯ ರೋಧನೆಯನ್ನು ನೋಡಿ ಇವರನ್ನು ಕುರುಕ್ಷೇತ್ರದ ಗಡಿ ದಾಟಿಸಿ ಬನ್ನಿರಿ ಎಂದು ತೀರ್ಪು ನೀಡಿದ್ದಳು. ಕಾಳಶಂಭು ಬಹಳ ವೇಗವಾಗಿಯೇ ರಥ ಓಡಿಸುತ್ತಿದ್ದ. ಕಾಳಶಂಭುವಿಗೆ ತನ್ನ ಹೆಂಡತಿ –ಮಗಳನ್ನು ನೋಡಬೇಕೆಂಬ ಆತುರವಿದ್ದರೆ, ರೋಹಿಣಿ ತನ್ನ ಗಂಡನನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಳು. ಕಾಳಶಂಭು ತನ್ನ ಊರು ತಲುಪಿ ಹೆಂಡತಿ ಮಗಳನ್ನು ನೋಡಿ ಅವರನ್ನು ಕರೆದುಕೊಂಡು ಬರಲು ಮನೆಗೆ ಹೋದವನು ಹೆಂಡತಿ ಮಾತ್ರ ಇದ್ದು ಮಗಳನ್ನು ಯಾರೋ ಹೊತ್ತೊಯ್ದರಂತೆ ಎಂಬ ವಿಷಯ ತಿಳಿದು ದುಃಖಿತನಾದ. ಆದರೆ ಚಂದ್ರಸೇನನ ಪ್ರಾಣವನ್ನು ಉಳಿಸಲು ಪ್ರಯತ್ನಿಸಿದರೂ ದಾರಿ ಮಧ್ಯೆದಲ್ಲಿ ಚಂದ್ರಸೇನ ಮರಣವನ್ನಪ್ಪಿದನು. ರೋಹೀಣಿ ತನ್ನೆಲ್ಲಾ ಪ್ರಯತ್ನವನ್ನು ಹಾಕಿ ರಾಜನನ್ನು ಬದುಕಿಸಲು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಇದಕ್ಕೆಲ್ಲಾ ಕಾರಣ ಯುದ್ಧ ಎಂಬ ನಿಲುವನ್ನು ಈ ಪಾತ್ರದ ಮೂಲಕ ಲೇಖಕಿ ಬಿಂಬಿಸುತ್ತಿದ್ದಾರೆ.

**ಪಾತ್ರ ಪೋಷಣೆ**

ಜಯ ಕಾದಂಬರಿಯೂ ಒಂದು ಪೌರಾಣಿಕ ಕಾದಂಬರಿಯಾಗಿದ್ದು, ಇದೇ ಕಾದಂಬರಿಯನ್ನು ಓದಿದಾಗ, ಕಾದಂಬರಿಯ ಪಾತ್ರಗಳೇ ಪ್ರಮುಖವಾಗಿ ನಿಲ್ಲುತ್ತದೆ. ಮಹಾಭಾರತದಲ್ಲಿ ಇಲ್ಲದ ಹೊಸ ಪಾತ್ರಗಳನ್ನು ಸೃಷ್ಟಿಸಿರುವುದು ವೇದಾರ ಸ್ವಂತ ಸೃಷ್ಟಿಯೇ ಆಗಿದೆ.

**ಪ್ರಧಾನ ಪಾತ್ರಗಳು**

**ದ್ರೌಪದಿ:** ಈ ಕಾದಂಬರಿಯ ಪ್ರಮುಖವಾದ ಪಾತ್ರ. ಈ ಕಾದಂಬರಿಯ ವಸ್ತು ದ್ರೌಪದಿ ಎಂದರೂ ತಪ್ಪಾಗಲ್ಲ. ಕುರುಕ್ಷೇತ್ರ ಯುದ್ಧದ ಆದಿ, ಅಂತ್ಯ, ಮಧ್ಯ ಎಂದೇ ಗುರುತಾಗಿ

ಬಿಟ್ಟಿದ್ದ ಜೀವ ದ್ರೌಪದಿ. ಅರ್ಜುನ ವೀರಪಣವಾಗಿ ಗೆದ್ದು ಕರೆ ತಂದ ದ್ರೌಪದಿ ಐದು ಜನ ಪಾಂಡವರ ಹೆಂಡತಿಯಾಗಿದ್ದಳು. ತನ್ನದಲ್ಲದ ತಪ್ಪಿಗೆ, ತನ್ನ ಗಂಡಂದಿರು ಇವಳನ್ನು ಒತ್ತೆಯಿಟ್ಟು ಸೋತಿದ್ದರು. ತನ್ನ ಗಂಡಂದಿರ ತಪ್ಪಿಗೆ ಸಭೆಯಲ್ಲಿ ತೀವ್ರ ಅವಮಾನ ಅನುಭವಿಸಿದ, ಸಭೆಯಲ್ಲಿ ಸೀರೆ ಎಳೆಸಿಕೊಂಡು ದುರ್ಯೋಧನ ತನ್ನ ತೊಡೆಯನ್ನು ತೋರಿಸಿ 'ಕೊಡು ಬಾ' ಎಂದು ಕರೆದಿದ್ದ. ಇಂತಹ ಅವಮಾನಕ್ಕೆ ಒಳಗಾದ ದ್ರೌಪದಿ 'ನನ್ನ ಹೆಣ್ತನದ ಅಪಮಾನ ಮಾಡಿದ ಈ ಪಾಪಿ ದುಶ್ಯಾಸನನಿಗೆ ತಕ್ಕ ಶಾಸ್ತಿ ಮಾಡಿಯೇ ತೀರುತ್ತೇನೆ. ಮಹಿಳೆಯೊಬ್ಬಳ ಹೆಣ್ತನದ ಅಪಮಾನ ಎಂತಹ ಪರಿಣಾಮದಲ್ಲಿ ಅಂತ್ಯಗೊಳ್ಳುತ್ತದೆ ಎಂಬುದನ್ನು ಇಡೀ ಜಗತ್ತಿಗೆ ತೋರಿಸುತ್ತೇನೆ" ಎಂದು ಪ್ರತಿಜ್ಞೆ ಮಾಡಿದಳು. ಇದಕ್ಕೆ ಒತ್ತಾಸೆಯಾಗಿ ಭೀಮನು ಸಹ ಅವನ ಎದೆ ಬಗೆದು ಬಿಸಿ ರಕ್ತ ಕುಡಿಯುವುದಾಗಿ ಧ್ವನಿಗೂಡಿಸಿದ್ದ. ಇವರ ಪ್ರತಿಜ್ಞೆ ಈಡೇರಲು ಯುದ್ಧವಾಗಲೇ ಬೇಕಿತ್ತು. ಇಲ್ಲಿಯೂ ದ್ರೌಪದಿಯು ಕಾರಣಳಾಗಿ ಪ್ರತಿಬಿಂಬಿತಳಾಗುತ್ತಾಳೆ. ಜೂಜಿನ ದೆಸೆಯಿಂದ ಪಾಂಡವರಿಗೆ ಅಜ್ಞಾನವಾಸವಾಯಿತು. ಇಲ್ಲಿಯೂ ಪಾಂಡವರೊಂದಿಗೆ ತೆರಳಿದವಳೆಂದರೆ ದ್ರೌಪದಿಯೇ. ಅಜ್ಞಾನವಾಸದಲ್ಲೂ ಕೀಚಕನ ಕಾಟ ಹೆಚ್ಚಾಯಿತು, ಅಲ್ಲೂ ಇವಳು ಅಪಮಾನ ಅನುಭವಿಸಿದಳು.

ಅಜ್ಞಾತವಾಸದಿಂದ ರಾಜ್ಯಕ್ಕೆ ಬಂದ ದ್ರೌಪದಿ ತನಗೆ ಅರಿವಿಲ್ಲದಂತೆಯೇ ಕುರುಕ್ಷೇತ್ರ ಯುದ್ಧಕ್ಕೆ ಕಾರಣಳಾದಳು. ದ್ರೌಪದಿ ಕೊನೆಯವರೆವಿಗೂ ಯುದ್ಧಬೇಕೋ ಬೇಡವೋ ಎಂಬ ದಂದ್ವದಲ್ಲೇ ಮುಳುಗಿದಳು. ಯುದ್ಧದಿಂದಾಗಿ ಉತ್ತರ, ಅಭಿಮನ್ಯು, ಘಟೋತ್ಕಚ ಮುಂತಾದವರ ಸಾವಿಗೆ ನಾನೇ ಕಾರಣ ಎಂದು ಕೊರಗುತ್ತಿದ್ದಳು. ಯುದ್ಧದ ಕೊನೆಯಲ್ಲಿ ತನ್ನ ಐದು ಜನ ಮಕ್ಕಳನ್ನು ಕಳೆದುಕೊಂಡಳು. ಬದುಕಿನುದ್ದಕ್ಕೂ ಈ ದ್ರೌಪದಿ ಕಳೆದುಕೊಳ್ಳುತ್ತಲೇ ಬಂದಳು. ಅತ್ತೆ ಕುಂತಿ ಮೌನವಾಗಿ ಕುಳಿತ ದ್ರೌಪದಿಗೆ ಅತ್ತುಬಿಡು ಎಂದು ಹೇಳಿದ್ದರು. "ನಾನು ಅಳುವುದಿಲ್ಲ ಅತ್ತೆ, ನನ್ನ ಕಣ್ಣುಗಳಿಂದ ಏನಾದರೂ ಸತ್ತ ನನ್ನವರಿಗಾಗಿ ಒಂದೇ ಒಂದು ಹನಿ ನೆಲದ ಮೇಲೆ ಬಿದ್ದರೂ ರಕ್ತಪಾತವನ್ನುಂಟುಮಾಡುತ್ತದೆ. ಈ ಕುರುಕ್ಷೇತ್ರ ಯುದ್ಧದಲ್ಲಿ ಬೇಕಾದಷ್ಟು ಜನ ಸತ್ತಿದ್ದಾರೆ ಅವರೆಲ್ಲರಿಗಾಗಿ ಮಾತ್ರ ಅಳುತ್ತೇನೆ. ಸತ್ತ ಎಲ್ಲರ ಮಗಳಾಗಿ ಅಳುತ್ತೇನೆ. ಸತ್ತ ಎಲ್ಲರ ತಾಯಿಯಾಗಿ ಅಳುತ್ತೇನೆ, ನನಗಾಗಿ, ನನ್ನ ತಂದೆ ಅಣ್ಣ ಮಕ್ಕಳಿಗಾಗಿ ಮಾತ್ರ ನಾನು ಅಳುವುದಿಲ್ಲ" ಎಂದು ಹೇಳುವ ಮಾತುಗಳ್ಲಲಿಯೇ ತಿಳಿಯುತ್ತದೆ. ಈ ಯುದ್ಧದಿಂದ ದ್ರೌಪದಿ ಎಷ್ಟು ಕೊರಗುತ್ತಿದ್ದಳೆಂದು.

'ಉತ್ತರಕುಮಾರ ಗಂಡು ಜಾತಿಗೆ, ಗಂಡಸುತನಕ್ಕೆ ಒಂದು ಕಳಂಕ' ಎಂದ ಅರ್ಜುನನ ಮಾತು ಕೇಳಿ ನಕ್ಕಿದ್ದ ದ್ರೌಪದಿ, ತುಂಬಿದ ಸಭೆಯಲ್ಲಿ ವೀರತ್ವಕ್ಕೆ ಗೆದ್ದು ತಂದ ಹೆಣ್ಣನ್ನು ತಾಯಿ

ಮಾತು ಕೇಳಿ ಐವರು ಹಂಚಿಕೊಳ್ಳುವಾಗ, ಮತ್ತೆ ಜೂಜಾಡಿ ಹೆಂಡತಿಯನ್ನು ಪಣವಿಟ್ಟು ಏಕವಸ್ತ್ರಧಾರಿಣಿಯಾಗಿದ್ದ ಹೆಂಡತಿಯನ್ನು ದಾಯಾದಿಗಳು ಎಳೆದಾಡುವಾಗ, ತೊಡೆತಟ್ಟಿ ತಮ್ಮ ಹೆಂಡತಿಯನ್ನು ಮತ್ತೊಬ್ಬ ಕರೆದಾಗ ಹೋಗಲಿ ಎಂದರೆ ಕೀಚಕ ಮತ್ತೆ ಕೂದಲಿಡಿದು ಆಸ್ಥಾನದಲ್ಲಿಯೇ ಎಳೆದಾಡಿದಾಗ.... ಒಂದೇ ಎರಡೇ ಸಂದರ್ಭಗಳು?! ಒಬ್ಬರಲ್ಲ, ಇಬ್ಬರಲ್ಲ ಐವರು ಗಂಡಸರಿಗೆ ಏಕಕಾಲಕ್ಕೆ ಸವಾಲು ಹಾಕಿದ ಸಂದರ್ಭಗಳು. ಆಗ ಈ ಅರ್ಜುನ ಯಾಕೆ ತನ್ನ ಗಂಡುಸುತನ ತೋರಲಿಲ್ಲ? ಹೆಣ್ಣಿನ ಅಪಮಾನ ಇವರು ನಂಬಿದ ಧರ್ಮಕ್ಕಿಂತ ಕೀಳಾಗಿತ್ತೆಂದೇ? ಆಗ ಅವರೆಲ್ಲ ಧರ್ಮಭೀತರಾಗಿದ್ದರೆಂದೇ? ಲೋಕದ ಬಾಯಲ್ಲಿ ವೀರಾಧಿವೀರರೆನ್ನಿಸಿಕೊಂಡ ಇವರೆಲ್ಲಾ ಒಂದು ಹೆಣ್ಣಿನ ವಿಷಯಕ್ಕೆ ಸಂಬಂಧಿಸಿದಂತೆ ನಪುಂಸಕರೇ ಆಗಿಬಿಟ್ಟಿದ್ದರಲ್ಲ. ಗಂಡಸುತನಕ್ಕೆ ಇವರೆಲ್ಲಾ ಕಳಶಪ್ರಾಯರಾ? ಎಂಬ ದ್ರೌಪದಿಯ ದಿಟ್ಟ ಮಾತುಗಳೇ ಅವಳು ಅನುಭವಿಸಿದ ನೋವನ್ನು ತಿಳಿಸುವುದಲ್ಲದೆ ತನ್ನನ್ನು ತಾನೇ ರಕ್ಷಿಸಿಕೊಳ್ಳುವ ಸಲುವಾಗಿ ಇಂತಹ ಮಾತುಗಳನ್ನಾಡುತ್ತಿದ್ದಳು. ದ್ರೌಪದಿ ಇಡೀ ಜಯ ಕಾದಂಬರಿಯ ನಾಯಕಿ (ನಾಯಕ) ಸ್ಥಾನದಲ್ಲಿಯೇ ನಿಲ್ಲುತ್ತಾಳೆ.

**ಕುಂತಿ:** ಜಯ ಕಾದಂಬರಿಯಲ್ಲಿ ಬರುವ ಇನ್ನೊಂದು ಪ್ರಮುಖ ಪಾತ್ರ. ಕುಂತಿ ಪಾಂಡವರ ತಾಯಿಯಾಗಿದ್ದು. ಪಾಂಡು ರಾಜನ ಧರ್ಮಪತ್ನಿ. ಪಾಂಡು, ಮಾದ್ರಿಯ ಸಾವಿನ ನಂತರ ಪಾಂಡವರನ್ನು ಸಾಕಿ ಸಲುಹಿದ ಮಾತೆ. ತನ್ನ ಮಗ ಅರ್ಜುನ ಏನನ್ನು ತಂದಿದ್ದಾನೆ ಎಂದು ತಿಳಿಯದೆ ಐದು ಜನರು ಹಂಚಿಕೊಳ್ಳುವಂತೆ ಹೇಳಿದ್ದು. ಇದರಿಂದಾಗಿಯೇ ದ್ರೌಪದಿ ಐದು ಜನ ಗಂಡಂದಿರ ಹೆಂಡತಿಯಾದಳು. ಕನ್ಯೆಯಾಗಿರುವಾಗಲೇ ಜನಿಸಿದ ಕರ್ಣನನ್ನು ಸಮಾಜಕ್ಕೆ ಹೆದರಿ ಗಂಗೆಯಲ್ಲಿ ತೇಲಿಬಿಟ್ಟಳು. ಯುದ್ಧ ಸಂದರ್ಭದಲ್ಲಿ ಕರ್ಣ ತನ್ನ ಮಗ ಎಂದು ತಿಳಿದಿದ್ದರೂ ಅದನ್ನು ಅವನು ಸಾಯುವ ತನಕ ಮತ್ತೊಬ್ಬರ ಬಳಿ ಬಾಯಿಬಿಡುವ ಧೈರ್ಯ ಮಾಡಿರಲಿಲ್ಲ. ಅಲ್ಲದೆ ತನ್ನ ಮಕ್ಕಳ ಉಳಿವಿಗಾಗಿ ಕರ್ಣನನ್ನು ಭೇಟಿ ಮಾಡಿದಾಗ ಅರ್ಜುನನ್ನು ಬಿಟ್ಟು ಉಳಿದ ಪಾಂಡವರ ತಲೆ ಕಾಯುವ ಬಗೆಗೆ ಮಾತು ಕೊಟ್ಟನು. ಹೆತ್ತು ಏನನ್ನೂ ಕೊಡದೆ ಗಂಗೆಗೆ ಬಿಟ್ಟ ತಾಯಿಗೆ ತನ್ನಿಂದಾದಷ್ಟನ್ನು ಕರ್ಣ ಕೊಟ್ಟು ಕಳುಹಿಸಿದ್ದ. ಕರ್ಣ ಸಾವಿನ ಸುದ್ದಿ ತಿಳಿದು ತುಂಬಾ ವ್ಯಥೆಪಟ್ಟ ಕುಂತಿ ಕರ್ಣನ ಶವವನ್ನು ನೋಡಲು ಕುರುಕ್ಷೇತ್ರಕ್ಕೆ ಹೋದಾಗ ದ್ರೌಪದಿ ಅತ್ತೆಯನ್ನು ಹುಡುಕುತ್ತಾ ಹೋಗಿದ್ದಳು. ಅತ್ತೆ ದುಃಖಿಸುವ ಪರಿ ನೋಡಿ ಅತ್ತೆಯನ್ನು ಪ್ರಶ್ನಿಸಿದಾಗ ನಡೆದ ವಿಷಯ ತಿಳಿಸಿದ್ದಳು. ವಿಷಯ ತಿಳಿದ ದ್ರೌಪದಿ ಅತ್ತೆಯನ್ನು ಸಮಾಧಾನಿಸುತ್ತಾ ಶಿಬಿರಕ್ಕೆ ಕರೆದುಕೊಂಡು ಹೋದಳು. ಕರ್ಣನ ಅಂತ್ಯ ಸಂಸ್ಕಾರದ ಸಮಯದಲ್ಲಿ ಸಾಕು ತಂದೆಯಾದ ಅಧಿರಥ ಸಂಸ್ಕಾರ ಮಾಡಲು ಧರ್ಮರಾಯನನ್ನು ಕೇಳಿಕೊಂಡಾಗ ಕೂಡದು, ಕೂಡದು ಕರ್ಣನ ಶವಸಂಸ್ಕಾರದ ಹಕ್ಕು ನಿನ್ನದಲ್ಲ, ನಮ್ಮದು ಎಂದು ಹುಚ್ಚಿಯಂತೆ ತಡೆಯಲು ಮುಂದಾದಳು ದ್ರೌಪದಿ ಇವಳನ್ನು

ಸಂತೈಸತೊಡಗಿದ್ದರೂ 'ಇಲ್ಲ ದ್ರೌಪದಿ ಈಗಲಾದರೂ ನನ್ನ ಒಡಲಲ್ಲಿ ಕುದಿಯುತ್ತಿರುವ ಸತ್ಯವನ್ನು ಹೊರಗೆ ಹಾಕಿಬಿಡುತ್ತೇನೆ. ಅಧಿರಥ, ಕರ್ಣ ನನ್ನ ಮಗ ಕನ್ಯತನದ ತಾಯ್ತನಕ್ಕೆ ಹೆದರಿ ಗಂಗೆಯಲ್ಲಿ ನಾನು ತೇಲಿ ಬಿಟ್ಟ ಮಗು. ಧರ್ಮರಾಯ ನಿಮ್ಮೆಲ್ಲರಿಗೂ ಕರ್ಣ ಅಣ್ಣ. ಪಾಂಡವನಲ್ಲದಿದ್ದರೂ ಅವನು ಕೌಂತೇಯ ಕರ್ಣ ನನ್ನ ಮಗ, ಕರ್ಣ ನನ್ನ ಮಗ ಅವನ ಸಂಸ್ಕಾರದ ಹಕ್ಕು ನನ್ನದು ನಮ್ಮೆಲ್ಲರದು' ಎಂದು ಅಳುತ್ತಾ ನುಡಿದಿದ್ದಳು. ಇವಳ ಮಾತುಗಳನ್ನು ಕೇಳಿ ಧಿಕ್ಕಾರ ಇರಲಿ ಹೆಣ್ಣುಗಳಿಗೆ, ಧಿಕ್ಕಾರ ಇರಲಿ ಹೆಣ್ತನಕ್ಕೆ' ಎಂದು ಕೋಪದಿಂದಲೇ ಧರ್ಮರಾಯ ನುಡಿದಿದ್ದನು. ಇಂತಹ ಸಮಯದಲ್ಲಿ ಅತ್ತೆಯನ್ನು ಸಮಾಧಾನಿಸಿ ಕರ್ಣನ ಸಂಸ್ಕಾರವನ್ನು ಅಧಿರಥನಿಗೆ ಒಪ್ಪಿಸಿದಳು. ಸೊಸೆಯು ಹೇಳುತ್ತಿದ್ದ ಮಾತು ಧರ್ಮರಾಯನಿಗಿಂತಲೂ ಸರಿಯಾದದ್ದು ಎಂದು ನಂಬಿದ್ದ ಕುಂತಿ ಸೊಸೆಯ ಮಾತಿಗೆ ತಲೆಯಾಡಿಸಿದ್ದಳು.

**ಭಾನುಮತಿ:** ಜಯ ಕಾದಂಬರಿಯಲ್ಲಿ ಭಾನುಮತಿಯ ಪಾತ್ರ ಕೂಡ ಬಹು ಮುಖ್ಯವಾಗಿದೆ. ಮಹಾಭಾರತದಲ್ಲಿ ಕಡೆಗಣಿಸಲ್ಪಟ್ಟ ಪಾತ್ರಗಳನ್ನು ವೇದಾರವರು ಜೀವ ತುಂಬಿ ಕಾದಂಬರಿಯನ್ನು ಬರೆದಿದ್ದಾರೆ. ಅಂತಹ ಪಾತ್ರಗಳಲ್ಲಿ ಭಾನುಮತಿಯ ಪಾತ್ರ ಕೂಡ ಒಂದು.

ಭಾನುಮತಿ ದುರ್ಯೋಧನ ಹೆಂಡತಿ. ಜಗತ್ತೇ ತಿಳಿದಂತೆ ಕೆಡುಕಿನ ಮಾರ್ಗದಲ್ಲಿ ಒಂಟಿ ಸಲಗಗಳಂತೆ ನಡೆಯುತ್ತಿರುವ ಗಂಡ ಮತ್ತು ಗಂಡನ ತಮ್ಮಂದಿರು ಏನನ್ನು ಬೇಕಾದರೂ ಮಾಡಬಹುದೆಂದು ತಿಳಿದಿತ್ತು. ನಾಲ್ಕು ಗೋಡೆಯೊಳಗೆ ಇರುವ ಹೆಣ್ಣನ್ನು ಹೊರಕ್ಕೆ ಎಳೆ ತಂದು ಇಬ್ಬರ ಸೋಲು-ಗೆಲುವುಗಳಿಗೆ ಅವಳನ್ನು ನಿಕಷ್ಟವನ್ನಾಗಿ ಇಟ್ಟುಕೊಳ್ಳಬಾರದಿತ್ತು. ಗಂಡನನ್ನು ಕ್ರೂರಿಯೆಂದು ಕೆಡುಕನೆಂದು ಹೇಳಿದನ್ನು ಅದನ್ನು ಕಿವಿಗೆ ಹಾಕಿಕೊಳ್ಳದಿದ್ದ ಭಾನುಮತಿ "ಒಂದು ಕ್ಷಣ.... ಒಂದೇ ಒಂದು ಕ್ಷಣ ದ್ರೌಪದಿಯ ಸ್ಥಾನದಲ್ಲಿ ನನ್ನನ್ನೋ ಅತ್ತೆಯವರನ್ನೋ, ತಂಗಿ ದುಶ್ಯಳೆಯನ್ನೋ ಇರಿಸಿ ನೋಡಿ...." ಎಂಬ ಭಾನುಮತಿಯ ಮಾತು ಕೇಳಿದ ದುರ್ಯೋಧನ ಸಲಗದಂತೆ ಘೀಳಿಟ್ಟಿದ್ದ. "ಧರ್ಮವನ್ನು ನೆಮ್ಮಿ ರಾಜಕಾರಣ ಮಾಡಲು ಹೊರಟವನಲ್ಲ ಈ ದುರ್ಯೋಧನ. ನನ್ನ ರಾಜಕಾರಣ ಶತ್ರುಗಳ ಹೆಂಡತಿಯರಿಗೆ ಯಾವ ಸ್ಥಿತಿಯನ್ನಾದರೂ ತರಬಲ್ಲದು. ಅದೇ ರಾಜಕಾರಣ ನನ್ನ ತಾಯಿ, ತಂಗಿ, ಹೆಂಡತಿಯರಿಗೆ ಅದಾಗದಂತೆ ತಡೆ ಹಿಡಿಯಲೂ ಬಲ್ಲದು. ಯಾಕೆಂದರೆ ನಾನು ಧರ್ಮವನ್ನು ನೆಮ್ಮಿ ನಿಂತ ಧರ್ಮರಾಯನಾಗಲಿ ಅಲ್ಲ, ನೆನಪಿರಲಿ ಮತ್ತೊಮ್ಮೆ ನಿನ್ನಿಂದ ಇಂತಹ ಮಾತುಗಳು ಬರುವುದಾದರೆ ದುರ್ಯೋಧನ 'ಹೆಂಡತಿಗೆ ಮರಣಶಿಕ್ಷೆ ವಿಧಿಸಿದ' ಎಂಬ ಮಾತು ಇತಿಹಾಸವನ್ನು ಸೇರಿಸುತ್ತದೆ ಎಂದು ಅವಳನ್ನು ಸುಮ್ಮನೆ ಇರಿಸಿದನು.

ಗಂಡನ ಸಾವಿನ ದಿನಗಳು ಇಂದು, ನಾಳೆ ಎಂದು ಎಣಿಸುತ್ತಾ, ಆತಂಕಗೊಂಡ ಕಾರಣದಿಂದಾಗಿ ಮೊಮ್ಮಗನಿಗೆ ಬುದ್ಧಿ ಮಾತು ಹೇಳುವಂತೆ ಭೀಷ್ಮ ಪಿತಾಮಹನಲ್ಲಿ ಕೇಳುತ್ತಾಳೆ. 'ಭೀಷ್ಮ ಪಿತಾಮಹನ ಭುಜಬಲಕ್ಕೆ ಮೊಮ್ಮಗನನ್ನು ಎದುರಿಸಲಾರದಷ್ಟು ಮುಪ್ಪು ಆವರಿಸಿದೆಯೇ! ಭೀಷ್ಮ ಪಿತಾಮಹನ ಮನೋಬಲ ಮೊಮ್ಮಗನೆದುರು.... ಇಷ್ಟು ದುರ್ಬಲಗೊಂಡಿದೆಯೇ? ಎಂದು ಕೆಣಕಿದರೂ ಭೀಷ್ಮ ಭಾನುಮತಿಗೆ ತಾಳ್ಮೆಯ, ಸಹಬಾಳ್ವೆಯ ವಿವೇಕವನ್ನು ಹೇಳುತ್ತಾನೆ. ಅವನೊಂದಿಗೆ ಇದ್ದು ಕೆಡುಕನ್ನು ಕಡಿಮೆ ಮಾಡುವ ಹಾದಿಯನ್ನಷ್ಟೇ ನೋಡಬೇಕು ಎಂದು ಅಪ್ಪಟ ಸ್ತ್ರೀ ವಿವೇಕವನ್ನು ಹೇಳುತ್ತಾರೆ. ಭಾನುಮತಿ ಮತ್ತೆಯೂ ಸುಮ್ಮನೆ ಕೂರದೆ ಧೃತರಾಷ್ಟ್ರ–ಗಾಂಧಾರಿಯ ಬಳಿಗೆ ಹೋಗಿ ಮಗನಿಗೆ ವಿವೇಕ ಹೇಳುವಂತೆ ಕೇಳುತ್ತಾಳೆ. 'ಎಲ್ಲರೂ ನನ್ನ ಮಗನಿಗೆ ಬುದ್ಧಿ ಹೇಳು ಎನ್ನುವವರೇ, ಅವನದೇನು ತಪ್ಪಿದೆ? ಪಾಂಡವರದೇನು ತಪ್ಪೇ ಇಲ್ಲವೇ? ನನ್ನ ಮಗ ನೇರವಾಗಿ, ನಿಷ್ಠುರವಾಗಿ ಯಾವ ಮುಚ್ಚು ಮರೆಯೂ ಇಲ್ಲದೆ ಮಾಡಿಬಿಡುವುದು ಜನರಿಗೆಲ್ಲಾ ದುಷ್ಟತನವಾಗಿಯೇ ಕಂಡುಬರುತ್ತದೆ.' ಎಂದು ಸೊಸೆಯ ಮೇಲೆ ಕೆಂಡ ಕಾರಿದನು. ಯಾರ್‍ಯಾರು ತನ್ನ ಪತಿಗೆ ಬುದ್ಧಿ ಹೇಳಬಹುದೆಂದು ಊಹಿಸಿದ್ದಳೋ ಆ ಊಹೆಗಳೆಲ್ಲಾ ನೀರಿನ ಗುಳ್ಳೆಗಳಂತೆ ಒಡೆದು ಹೋದವು. ಭಾನುಮತಿ ದುರ್ಯೋಧನನ್ನು ಕಳೆದುಕೊಂಡು ಕುಳಿತಿದ್ದಾಳೆ, ಭಾನುಮತಿಯ ಅಂತಃಪುರವನ್ನು ಪ್ರವೇಶಿಸಿದ ದ್ರೌಪದಿ ನನ್ನನ್ನು ಕ್ಷಮಿಸುಬಿಡು' ಎಂದು ಕೇಳಿದರೆ 'ಬಿತ್ತಿದ್ದನ್ನು ಬೆಳೆದರು ಬೆಳೆದದ್ದೇನೆಂದು ನೋಡದೆ ಕೈ ಬೀಸಿ ಹೊರಟುಬಿಟ್ಟ ಅವರೆಲ್ಲಾ ಪುಣ್ಯವಂತರಾದರು. ಬೆಳೆದ ಕೆಡುಕನ್ನು ನೋಡಬೇಕಾದ ಪಾಪಿಯಾದೆ ನಾನು' ಎಂದೂ ಕುರುಕ್ಷೇತ್ರಕ್ಕೆ ಕಾರಣನಾದ ಗಂಡನ ಮಡದಿಯಾಗಿ ನಾನು ನಿನ್ನ ಕ್ಷಮೆಯನ್ನು ಕೇಳುತ್ತಿದ್ದೇನೆ. ಕ್ಷಮಿಸಬೇಕಾದವಳು ನೀನು' ಎಂದು ಭಾನುಮತಿ ಹೇಳುವ ಮಾತುಗಳು ಅವರ ಉದಾರತೆಯನ್ನು ತಿಳಿಸುತ್ತದೆ. ಜೊತೆಗೆ ದ್ರೌಪದಿಗೆ ತುಸು ನೆಮ್ಮದಿಯನ್ನು ನೀಡುತ್ತದೆ.

**ಗಾಂಧಾರಿ:** ಸುಬಲರಾಜನ ಮಗಳು. ಧೃತರಾಷ್ಟ್ರನ ಮಡದಿ, ಕೌರವರ ತಾಯಿ, ಸುಬಲ ರಾಜನು ಭಯ, ಭೀತಿಯಿಂದಾಗಿ ಗಾಂಧಾರಿಯನ್ನು ಕುರುಡನಾದ ಧೃತರಾಷ್ಟ್ರನಿಗೆ ಮಗಳನ್ನು ಕೊಡಲು ನಿರ್ಧರಿಸಿದನು. ಭರತವಂಶದವರ ಹೆದರಿಕೆಯಿಂದ ಮಗಳನ್ನು ಒಂದು ಮಾತು ಕೇಳದಯೇ ಮದುವೆ ಸಿದ್ಧತೆ ಮಾಡಿದ ಮದುವೆಯ ದಿನ ಅಂತರಪಟ ಸರಿದು ಎದುರಿಗಿದ್ದ ವರ ಎಳ್ಳು ಜೀರಿಗೆಯನ್ನು ತನ್ನ ತಲೆಯ ಮೇಲೆ ಸರಿಯಾಗಿ ಹಾಕದೆ ಭುಜ, ನೆಲ, ಎಲ್ಲೆಲ್ಲೋ ಹಾಕಿಬಿಟ್ಟಗ! ಗಾಬರಿಯಾದ ಗಾಂಧಾರಿ ಮಧುವಣಗಿತ್ತಿಯ ಸಂಕೋಚ, ಲಜ್ಜೆಗಳನ್ನು ಬಿಟ್ಟು ತಲೆ ಎತ್ತಿ ನೋಡಿದ್ದಳು. ಎದುರು ಕಂಡ ನೋಟ ಅವಳ ತಲೆಯಲ್ಲಿ ನೂರಾರು ಜ್ವಾಲಾಮುಖಿಯನ್ನು ಏಕಕಾಲಕ್ಕೆ ಸ್ಫೋಟಿಸಿದ್ದವು. ಅದೇ ತಾನೇ ಸರಿದು ಸಖಿಯರ ಕೈಯಲ್ಲಿದ್ದ ಅಂತರಪಟವನ್ನು ಕಿತ್ತುಕೊಂಡು ಅವಳು ತನ್ನ ಕಣ್ಣಿಗೆ ತಾನೇ ಕಟ್ಟಿಕೊಂಡು

ಬಿಟ್ಟಳು. ತನಗೆ ದೊರಕುತ್ತಿರುವ ಅಂಧಪತಿಯನ್ನು ನೋಡಲಾರೆನೆಂಬಂತೆ! ಆದರೆ ಇಡೀ ಮದುವೆ ಮನೆ ಜಗತ್ತು ಹಾ ಹಾ ಎಂತಹ ಪತಿವ್ರತೆ ಗಂಡನಿಗಿಲ್ಲದ ಭಾಗ್ಯ ತನಗೆ ಬೇಡವೆಂದು ತನ್ನ ಕಣ್ಣುಗಳ ಬೆಳಕನ್ನೇ ನಂದಿಸಿಕೊಂಡುಬಿಟ್ಟಳು. ಆ ಕ್ಷಣದ ಅವಳ ಆ ಕಾರ್ಯವನ್ನು ಜನಗಳ ಮಾತು ಜೀವಮಾನ ಪೂರ್ತಿ ಅವಳು ಹಾಗೆ ಇರುತ್ತಾಳೆಂದು ಘೋಷಿಸಿಬಿಟ್ಟಿತ್ತು. ಗಾಂಧಾರಿ ಪಾತಿವ್ರತ್ಯದ ಹೆಸರಿನಲ್ಲಿ ಕಂಗಳ ಬೆಳಕನ್ನು ಕಳೆದುಕೊಂಡಿದ್ದಳು.

ಬಯಸದ ದಾಂಪತ್ಯದ ಜೊತೆಗೆ ಬಂದ ತಾಯ್ತನವೂ ಅವಳಿಗೆ ಒಂದು ಹೊರೆಯಾಗಿತ್ತೆಂದೇ ಹೇಳಬೇಕು ಆದರೂ ದರ್ಯೋಧನ, ದುಶ್ಯಾಸನ, ದುಶ್ಯಲೆಯನ್ನು ಅವಳು ಹೆತ್ತಿದ್ದಳು

ಕಣ್ಣು ಕಟ್ಟಿಕೊಂಡ ಗಾಂಧಾರಿ ಯಾರನ್ನು ನೋಡಿಯಾಳು? ಕಣ್ಣುಕಟ್ಟಿಕೊಂಡೇ ಮಕ್ಕಳಿಗೆ ಬುದ್ಧಿಹೇಳುತ್ತಿದ್ದಳು. ಆದರೆ ಅವಳ ಮಾತುಗಳಿಗೆ ವ್ಯತಿರಿಕ್ತ ಮಾತುಗಳನ್ನಾಡಿಯೇ ಧೃತರಾಷ್ಟ್ರ ಮಕ್ಕಳನ್ನು ಬೆಳಸತೊಡಗಿದ್ದ. ಮಕ್ಕಳು ಬೆಳೆದು ದೊಡ್ಡವರಾದರು. ಅವರ ಕೆಡುಕು, ಕ್ರೂರತನಗಳು ಬೆಳೆದು ದೊಡ್ಡವುಗಳಾಗಿದ್ದವು. ಇದರಿಂದಗಿ ಗಾಂಧಾರಿ ಮಕ್ಕಳನ್ನು ಶಾಶ್ವತವಾಗಿ ದ್ವೇಷಿಸುವಂತೆ ನಿರಾಕರಿಸುವಂತೆ ಮಾಡಿಬಿಟ್ಟಿತ್ತು. ಕಿವಿಯಿದ್ದು ಕೇಳದ ಸ್ಥಿತಿ ತಲುಪಿದಳು.

**ಪೂರಕ ಪಾತ್ರಗಳು**

**ಅಭಿಲಾಷಾ:** ಇವಳು ಕಾಶಿಯ ರಾಜಕುಮಾರ ಅಭಿಭೂವಿನ ಹೆಂಡತಿ. ಕುರುಕ್ಷೇತ್ರ ಯುದ್ಧದಲ್ಲಿ ಭಾಗವಹಿಸಲು ಬಂದಿದ್ದ ತನ್ನ ಪತಿ ಅಭಿಭೂವಿನೊಂದಿಗೆ ಬಂದಿದ್ದಳು. ಇವಳಿಗೆ ಕುರುಕ್ಷೇತ್ರ ಯುದ್ಧದಲ್ಲಿ ತನ್ನ ಪತಿ ಯುದ್ಧ ಮಾಡುವುದು ಇಷ್ಟವಿಲ್ಲದಿದ್ದರೂ ಅಭಿಭೂವಿನ ನಿರ್ಧಾರ ಬದಲಾಗಿರಲಿಲ್ಲ. ಕುರುಕ್ಷೇತ್ರ ಯುದ್ಧಕ್ಕೆ ಬಂದ ಇವರಿಗೆ ಒಂದು ಚಿಕ್ಕ ಬಿಡಾರ ದೊರೆಯಿತು. ಕುರುಕ್ಷೇತ್ರದ ಮೊದಲ ದಿನದ ಯುದ್ಧ ಆರತಿ ಎತ್ತಿ ಗಂಡನನ್ನು ಕಳುಹಿಸಿದ ನಂತರ "ದೇವರೇ ರಾಜಕುಮಾರನಿಗೆ ಏನೂ ಕೆಡಕು ಸಂಭವಿಸದೇ ಹಿಂತಿರುಗಿ ಬರಲಿ" ಎಂದು ಅವಳ ಮನಸ್ಸು ನಿರಂತರವಾಗಿ ಪ್ರಾರ್ಥಿಸುತ್ತಿತ್ತು. ಅಂತೆಯೇ ಅವಳ ಗಂಡನಿಗೆ ಏನೂ ಆಗದೆ ಹಿಂತಿರುಗಿದುದನ್ನು ನೋಡಿ ಸಂತೋಷಗೊಂಡಿದ್ದಳು. ಇದೂ ಹೀಗೆ ಮುಂದುವರೆಯುತ್ತಾ ಇವಳ ಗಂಡ ಸಣ್ಣ ಪುಟ್ಟ ಗಾಯಗಳಾಗದೆ ಮರಳಿ ಬರುತ್ತಿದ್ದುದು ಇವಳಿಗೆ ಚೈತನ್ಯವನ್ನು ನೀಡುತ್ತಿತ್ತು. ಈ ನಡುವೆ ಕಾಶಿ ರಾಜ್ಯದ ಸಾಮಂತ ರಾಜನಾದ ಚಂದ್ರಸೇನನ ರಾಣಿ ರೋಹಿಣಿಯೊಂದಿಗೆ ಗೆಳೆತನ ಪ್ರಾರಂಭವಾಗಿತ್ತು. ಬೇಸರ ಕಳೆಯಲು ಒಬ್ಬ ಜೊತೆಗಾರ್ತಿ ಸಿಕ್ಕಂತೆ ಆಯಿತು. ಒಂದು ದಿನ ರೋಹಿಣಿ ಅಭಿಲಾಷಾ

ದೇವಿಯವರು ಮಾತನಾಡುತ್ತಾ ಮಾತನಾಡುತ್ತಾ ದ್ರೌಪದಿಯ ಬಿಡಾರದ ಮಾರುದೂರದವರೆಗೂ ಹೋಗಿದ್ದರು. ಭಟ ಕಾಳಶಂಭು ಅವರನ್ನು ಮರಳಿ ಹಿಂದಕ್ಕೆ ಕಳುಹಿಸಿದ. ಇವರು ಕಾಳಶಂಭುವಿನ ಪೆದ್ದು ಮುಖ ನೋಡಿ ಅದನ್ನು ನೆನಪಿಸಿಕೊಂಡು ನಗಲಾರಂಭಿಸಿದರು. ಈ ನಗೆಯ ಅಬ್ಬರ ದ್ರೌಪದಿಯ ಬಿಡಾರಕ್ಕೂ ತಲುಪಿ, ದ್ರೌಪದಿ ಅಭಿಲಾಷಾ-ರೋಹಿಣಿಯನ್ನು ಕರೆಸಿ ಪ್ರೀತಿಯಿಂದ ಮಾತನಾಡಿ "ನಗುವುದನ್ನು ನನಗೂ ಕಲಿಸಿಕೊಡಿರಿ, ಇಲ್ಲ ನಿಮ್ಮ ನಗೆಯಲ್ಲಿ ನನಗೆ ಒಂದಿಷ್ಟು ಕಡ ಕೊಡಿರಿ" ಎಂದು ಭುಜಮುಟ್ಟಿ ಮಾತನಾಡಿಸಿದಳು. ಅವರೆಗೂ ಅವರಿಗೆ ಇದ್ದ ದ್ರೌಪದಿ ಮೇಲಿನ ಕೋಪ, ಅಸಹನೆ, ದ್ವೇಷ ದೂರಾಗಿ ಅಭಿಮಾನ ಪ್ರೀತಿ, ವಿಶ್ವಾಸ ಮೂಡಿತ್ತು.

ಕೆಲದಿನಗಳ ನಂತರ ಅಭಿಮನ್ಯುವಿನ ಮರಣವಾರ್ತೆ ಕೇಳಿ ದ್ರೌಪದಿಯ ಬಳಿ ಬಂದಿದ್ದ ಸುಭದ್ರೆ ಮಾತುಕತೆಯಲ್ಲಿ ನಿರತರಾಗಿದ್ದಾಗ ಬೆಚ್ಚಿಬೀಳಿಸುವ ವಿಚಿತ್ರ ಆರ್ತನಾದ ಕೇಳಿ ದ್ರೌಪದಿ-ಸುಭದ್ರೆ ಹೊರಬಂದರು. ಅಡ್ಡಾದಿಡ್ಡಿಯಾಗಿ ಉಟ್ಟಿದ್ದ ಮಾಸಿದ ಬಟ್ಟೆಗಳು, ಚೆಲ್ಲಾಪಿಲ್ಲಿಯಾದ ಕೇಶರಾಶಿ, ಅದಕ್ಕೆ ಮೆತ್ತುಕೊಂಡಿದ್ದ ಮಣ್ಣು, ಕಸಕಡ್ಡಿ, ವಿಚಿತ್ರವಾಗಿ ಕೈಕಾಲುಗಳನ್ನು ಆಡಿಸುತ್ತಾ ಅರ್ಥವಿಲ್ಲದ ಮಾತುಗಳನ್ನು ಹೊರಡಿಸುತ್ತಾ ನಗುವ ನಗುವಿನ ಕರ್ಕಶತೆ..... ಕಂಡು ದ್ರೌಪದಿ ಕಾಳಶಂಭುವನ್ನು ಯಾರದು ಎಂದು ಕೇಳಿದಾಗ 'ನಿಮ್ಮ ಬಳಿಗೂ ಒಂದೆರಡು ಭಾರಿ ಬಂದಿದ್ದರಲ್ಲ ತಾಯಿ ಕಾಶೀರಾಜಕುಮಾರ ಅಭಿಭೂರ ಪತ್ನಿ ಅಭಿಲಾಷಾದೇವಿಯವರು' ನೆನ್ನಿಯ ದಿನದ ಯುದ್ಧದಲ್ಲಿ ಅಭಿಭೂ ರಾಜಕುಮಾರ ಮಡಿದರಂತೆ ತಾಯಿ ಈ ಸುದ್ದಿ ಇವರಿಗೆ ತಲುಪಿದ್ದೇ ತಡ ಹೀಗಾಗಿಬಿಟ್ಟರು ಎಂಬ ಮಾತುಕೇಳಿ ಅವಳ ನಗುವನ್ನು ಕಿತ್ತುಕೊಂಡವಳು, ಕುರುಕ್ಷೇತ್ರದ ಯಜ್ಞಕ್ಕೆ ಅವನ ಗಂಡನನ್ನು ಬಲಿಗೊಟ್ಟವಳು ನಾನು ಎಂಬ ಪಾಪ ಪ್ರಜ್ಞೆ ಕಾಡಿತ್ತು. ಆದರೂ ಕುರುಕ್ಷೇತ್ರದಂತಹ ಯುದ್ಧ. ನಗುತ್ತಾ ಅರಳುತ್ತಿದ್ದ ಅಭಿಲಾಷಾ ಎಂಬ ಮುಗ್ಧೆಯ ಜೀವನವನ್ನು ಹಾಳುಮಾಡಿಬಿಟ್ಟಿತ್ತು.

**ಕರ್ಣ:** ಜಯ ಕಾದಂಬರಿಯ ಒಂದು ವೈಶಿಷ್ಟ್ಯ ಎಂದರೆ ಕರ್ಣನಂತಹ ಪಾತ್ರವನ್ನು ವೈಭವೀಕರಿಸಿರುವುದು. ಕರ್ಣ ಕುಂತಿಯ ಮಗ. ತನ್ನ ಕನ್ಯೆತನದಲ್ಲಿ ಮಾಡಿದ ತಪ್ಪಿಗಾಗಿ ಹುಟ್ಟಿದ ಮಗ. ಜಗತ್ತಿಗೆ ಸಮಾಜಕ್ಕೆ ಹೆದರಿ ಕರ್ಣನನ್ನು ಗಂಗೆಯಲ್ಲಿ ತೇಲಿಬಿಟ್ಟಳು. ಗಂಗೆಯಲ್ಲಿ ಸಿಕ್ಕ ಕರ್ಣನನ್ನು ಅಧಿರಥ ಮತ್ತು ರಾಧೆ ಇಬ್ಬರೂ ತಂದೆ-ತಾಯಿಗಳಾಗಿ ಪ್ರೀತಿಯಿಂದ ಸಾಕಿ ಬೆಳೆಸಿದರು. ದುರ್ಯೋಧನ ಎಂದರೆ ಇವನ ಪ್ರಾಣ ಸ್ನೇಹಿತ. ಜಗತ್ತಿನ ಎಲ್ಲರೂ ಕರ್ಣನನ್ನು ಕುಲ, ವಂಶ, ಪ್ರತಿಷ್ಠೆಯಿಂದಲೇ ಅವಮಾನಿಸುತ್ತಿದ್ದರು. ಸೂತಪುತ್ರ ಎಂದು ಕರೆಯುತ್ತಿದ್ದರು. ಆದರೆ ದುರ್ಯೋಧನನೊಬ್ಬನೇ ದುಃಖಿಸುತ್ತಿದ್ದ ಕರ್ಣನ ಬದುಕಿನಲ್ಲಿ ಸಂತಸದ ಹೊನಲನ್ನು ತಂದುಕೊಟ್ಟವನು.

ಕರ್ಣ ಕೌರವರ ಸೇನಾನಾಯಕನಾಗುವ ವಿಷಯ ತಿಳಿಯುತ್ತಿದ್ದಂತೆ ಭೀಷ್ಮ, ಕೃಷ್ಣ ಇವನ ಮನವೊಲಿಸಲು ಪ್ರಯತ್ನಿಸಿದ್ದರು. ಪಾಂಡವರೊಡನೆ ಸೇರು ಎಂದಿದ್ದರು. ಇದು ಫಲಿಸದ ಕಾರಣ ಕುಂತಿಯೂ ಸಹ ಎಂದಿಗೂ ತನ್ನ ಮಗನನ್ನು ನೋಡದೆ ಇದ್ದವಳು ತನ್ನ ಮಕ್ಕಳು ಪಾಂಡವರ ಉಳಿವಿಗಾಗಿ ಕರ್ಣನನ್ನು ಭೇಟಿ ಮಾಡಿದ್ದಳು. ಹೆತ್ತು ನೀರಿನಲ್ಲಿ ಬಿಟ್ಟು ತನಗೆ ಏನನ್ನೂ ಕೊಡದ ತಾಯಿಗೆ ಕರ್ಣ ಅರ್ಜುನನ್ನು ಬಿಟ್ಟು ಉಳಿದ ಪಾಂಡವರ ತಲೆ ಕಾಯುವ ಮಾತು ಕೊಟ್ಟನು.

ಭೀಷ್ಮ ಶರಶಯ್ಯೆಯಲ್ಲಿ ಮಲಗಿದ ನಂತರ ಕರ್ಣ ದುರ್ಯೋಧನನ್ನು ಭೇಟಿ ಮಾಡಿ ಯುದ್ಧ ಮುನ್ನಡೆಸಲು ತಿಳಿಸಿದನು. ಕರ್ಣ ಬರುವಿಕೆಯಿಂದ ದುರ್ಯೋಧನನಿಗೆ ಆನೆ ಬಲ ಬಂದಿತ್ತು. ಅರ್ಜುನನಿಗೆ ಕೃಷ್ಣ ಸಾರಥಿಯಾಗಿ ಅವನನ್ನು ಮುನ್ನಡೆಸುತ್ತಾನೆ. 'ಕೃಷ್ಣನಂತೆಯೇ ಅಶ್ವ ಹೃದಯವನ್ನು ಬಲ್ಲ ಶಲ್ಯನೆ ತನ್ನ ಸಾರಥಿಯಾಗಬೇಕೆಂದು' ಕೇಳುತ್ತಾನೆ. ಇದಕ್ಕೆ ಶಲ್ಯನನ್ನು ಒಪ್ಪಿಸುವುದು ಕಷ್ಟ ಎಂದು ತಿಳಿದಿದ್ದರೂ ಹಿತನುಡಿಯಿಂದ ಶಲ್ಯನನ್ನು ಒಪ್ಪಿಸುತ್ತಾನೆ. ಆದರೆ ಶಲ್ಯ ಒಂದು ಷರತ್ತನ್ನು ಹಾಕುತ್ತಾನೆ. ರಾಧೇಯನಿಗೆ ಸಾರಥಿಯಾಗಿರುವಾಗ ನಾನು ಏನೂ ಬೇಕಾದರೂ ಮಾತನಾಡಲು ಸ್ವತಂತ್ರನಿರುತ್ತೇನೆ. ಅದನ್ನು ಆ ನಿನ್ನ ಗೆಳೆಯ ರಾಧೇಯ ಮರೆಯಬಾರದು' ಎಂದಿದ್ದನು. ಅದಕ್ಕೆ ದುರ್ಯೋಧನ ಸಮ್ಮತಿಸಿದ.

ಕರ್ಣ ಪಾಂಡವರ ಮೇಲೆ ಯುದ್ಧ ಮಾಡುವಾಗ ಶಲ್ಯ ಪಾಂಡವರನ್ನು ಹೊಗಳುತ್ತಾ ಕರ್ಣನನ್ನು ಮತ್ತೆ ಮತ್ತೆ ಕೀಳರಿಮೆಯ ಕೂಪಕ್ಕೆ ನೂಕುತ್ತಿದ್ದ. ಆದರೂ ಕರ್ಣ ಧರ್ಮರಾಯನನ್ನು ಸೋಲಿಸಿ ಮುನ್ನುಗ್ಗಿ ಅರ್ಜುನನ ಎದುರಿಗೆ ಬಂದು ನಿಂತಿದ್ದ. ಕೊಂಕು ಮಾತುಗಳನ್ನು ಆಡುತ್ತಿದ್ದ ಶಲ್ಯನಿಂದಾಗಿ ಪ್ರಯೋಗಿಸಿದ ಮಹಾಸ್ತ್ರಗಳೆಲ್ಲಾ ವ್ಯರ್ಥವಾಗಿ ಹೋಗಿದ್ದವು. ಆ ಸೋಲು ಕಲಿತ ಯುದ್ಧ ಮರೆಯುವಂತೆ ಮಾಡಿತ್ತು. ರಥದ ಚಕ್ರ ಭೂಮಿಯಲ್ಲಿ ಹೂತು ಹೋಗಿತ್ತು. ಕುದುರೆಗಳು ಮುಗ್ಗರಿಸಿದವು. ಸಾರಥಿ ಮುಂದೆ ಬಿದ್ದಿದ್ದನು. ಕರ್ಣ ನಿಜವಾಗಿಯೂ ಬಹಳವೇ ದುಃಖಿತನಾದನು. ತನಗಾಗಿಯಲ್ಲ ತನ್ನ ಗೆಳೆಯ ದುರ್ಯೋಧನನಿಗಾಗಿ. ಅವನಿಗೆ ಜಯ ತಂದುಕೊಡಲಾಗಲಿಲ್ಲವೆಂದು. ವಿಧಿಯನ್ನು ಒಂದೇ ಸಮನೆ ಪ್ರಾರ್ಥಿಸುತ್ತಿದ್ದ ವೇಳೆ ಅರ್ಜುನ ಬಾಣ ಪ್ರಯೋಗಿಸಿದ್ದ. ಆ ಬಾಣದಿಂದಾಗಿ ಕರ್ಣ ಹತನಾದನು.

**ದುಶ್ಯಲೆ:** ಮಹಾಭಾರತದಲ್ಲಿ ಪ್ರಾಮುಖ್ಯತೆ ಸಿಗದಿದ್ದ ಸ್ತ್ರೀಪಾತ್ರದಲ್ಲಿ ದುಶ್ಯಲೆ ಪಾತ್ರವೂ ಒಂದು. ಇವಳು ದುರ್ಯೋಧನನ ತಂಗಿ. ಜಯದ್ರಥನ ಹೆಂಡತಿ. ಅಭಿಮನ್ಯುವಿನ ಸಾವಿನಿಂದಾಗಿ ಕೋಪಗೊಂಡಿದ್ದ ಅರ್ಜುನ ನಾಳೆ ಯುದ್ಧದಲ್ಲಿ ಜಯದ್ರಥನನ್ನು ಸೋಲಿಸಿ ಸಾಯಿಸುವುದಾಗಿ ನುಡಿದಿದ್ದನು. ಇದನ್ನು ತಿಳಿದಿದ್ದ ಜಯದ್ರಥ ಬಿಡಾರದೊಳಗೆ ಅತ್ತಿಂದಿತ್ತ ಇತ್ತಿಂದಿತ್ತ

ಓಡಾಡುತ್ತಾ ಒಂದಕ್ಕೊಂದು ಸಂಬಂಧ ಇಲ್ಲದಂತೆ ಬಾಯಿಗೆ ಬಂದದ್ದನ್ನು ಬಡಬಡಿಸುವುದಕ್ಕೆ ಆರಂಭಿಸಿದ್ದ. "ಇಂದಾದರೂ ಶಾಂತವಾಗಿ ಮಲಗಬಾರದೆ" ದುಶ್ಯಲೆ ನುಡಿದಿದ್ದಳು, ಇದನ್ನು ಕೇಳಿದ ಪತಿ 'ನನ್ನ ಪತ್ನಿಯಾಗಿದ್ದು ನನ್ನ ಸಾವಿನ ನಿರೀಕ್ಷೆಯನ್ನು ಎಷ್ಟು ತಣ್ಣಗೆ ಅನುಭವಿಸುತ್ತಿದ್ದೀಯ' ಎಂದು ಕಿರುಚಾಡಿದದ್ದ.

'ನಿಮ್ಮ ಸಾವಿನ ನಿರೀಕ್ಷೆಯನ್ನು ಈ ಕ್ಷಣದಿಂದ ನೀವು ಮಾಡುತ್ತಿರಬಹುದು ಆದರೆ ಅದನ್ನು ಕುರಿತ ನನ್ನ ನಿರೀಕ್ಷೆ ನನ್ನ ನಿಮ್ಮ ದಾಂಪತ್ಯದಷ್ಟ ಹಳೆಯದು. ಹಳೆಯದರಲ್ಲಿ ತೀವ್ರತೆ ಎಲ್ಲಿಯದು. ನೀವು ಮಾಡಿದ್ದರ ಪ್ರತಿಫಲ ಏನೆಂದು ನೀವು ಯೋಚಿಸದೆ ಇದ್ದಿರಬಹುದು. ಆದರೆ ನಾನು ಮೊದಲೇ ಯೋಚಿಸಿದ್ದೇನೆ. ಅದಕ್ಕೆ ನಾನು ಮತ್ತೆ ಆಲೋಚಿಸಲು ಹೋಗುವುದಿಲ್ಲ ಮಲಗಿರಿ' ಎಂದಳು.

ಮಾರನೇ ದಿನ ಯುದ್ಧಕ್ಕೆ ಕಳುಹಿಸಲು ದುಶ್ಯಲೆ ಬಾರದಿದ್ದನ್ನು ಗಮನಿಸಿದ ದುರ್ಯೋಧನ ತಂಗಿಯ ಬಿಡಾರದತ್ತ ಹೋಗಿದ್ದನು. ಅಲ್ಲಿ ಕೆದರಿದ ತಲೆ, ಅಳಿಸಿದ ಕುಂಕುಮ, ಒಡೆದ ಬಳೆ ಚೂರುಗಳನ್ನು ಮುಂದೆ ಇಟ್ಟುಕೊಂಡು ಅವಳು ಶಾಂತವಾಗಿ ಕುಳಿತಿದ್ದಳು.

ಇದೇನು ನಿನ್ನ ಅವತಾರ. ಪತಿ ಸಾವು ಬದುಕುಗಳನ್ನು ನಿರ್ಧರಿಸುವ ಯುದ್ಧಕ್ಕೆ ಹೊರಟಿದ್ದಾನೆ. ಈ ಅಮಂಗಳದ ರೂಪದಲ್ಲಿ ಕುಳಿತಿರುವುದಾ? ಮಂಗಳ ಚಿನ್ಹೆಗಳನ್ನು ಧರಿಸಿ ಮುತ್ತೈದೆ ಮಂಗಳಾಂಗಿಯಾಗಿ ಆರತಿಯನ್ನೆತ್ತಲು ಬಾ' ಎಂದು ಕರೆದನು. ದುಶ್ಯಲೆ ನಾನು ಬರುವುದಿಲ್ಲ ಎಂದು ಅಣ್ಣನನ್ನು ಕಳುಹಿಸಿದಳು.

ಆ ದಿನದ ಯುದ್ಧದಲ್ಲಿ ಜಯದ್ರಥ ಪ್ರಾಣಬಿಟ್ಟಿದ್ದನು. ದುರ್ಯೋಧನ ಅವಳ ಕೈಗಳನ್ನು ಹಿಡಿದು ಕೊಟ್ಟ ಮಾತನ್ನು ಉಳಿಸಿಕೊಳ್ಳಲಾಗಲಿಲ್ಲ ಎಂದನು. ದುಶ್ಯಲೆ ಈಗ ನಾನು ಒಂದು ಮಾತು ಕೇಳುತ್ತೇನೆ ಕೊಡುತ್ತೀಯಾ? ಎಂದು "ಈಗಲಾದರೂ ಯುದ್ಧವನ್ನು ನಿಲ್ಲಿಸಿ ದರ್ಮಪ್ರಕಾರವಾಗಿ ಪಾಂಡವರಿಗೆ ಏನು ಕೊಡಬೇಕೋ ಅದನ್ನು ಕೊಟ್ಟು ಅವರೊಂದಿಗೆ ಪ್ರೀತಿಯಿಂದ ಬದುಕು" ಎಂಬ ಮಾತಿಗೆ 'ಕೊಡಲಾರೆ ನಿನಗೆ ಮಾತು ಕೊಡಲಾರೆ' ಎಂದು ನುಡಿದನು. ಇದನ್ನು ಕೇಳಿ ಅಣ್ಣನ ಮಾತಿಗೆ ಕಿವಿಗೊಡದೆ ರಥವೇರಿ ಹೋಗಿಬಿಟ್ಟಳು.

**ಅಭಿವ್ಯಕ್ತಿ/ಶೈಲಿ:** ವೇದಾರವರ ಜಯ ಕಾದಂಬರಿಯೂ ಅತ್ಯಂತ ಸಂಯಮದ ಚೀರಾಟ ಕೂಗಾಟಗಳಿಲ್ಲದೆ ಹೊಸ ಮೌಲ್ಯಗಳನ್ನು ಸದ್ದಿಲ್ಲದೆ ಅನಾವರಣ ಮಾಡಿದೆ. ಇದೊಂದು ಪೌರಾಣಿಕ ಕಾದಂಬರಿಯಾಗಿದ್ದು ಮೂಲ ಕಥೆಗೆ ಚ್ಯುತಿ ಬಾರದಂತೆ ಸೂಕ್ಷ್ಮವಾಗಿ ಬರೆದಿದ್ದಾರೆ.

ವೇದಾರವರು ಕಾದಂಬರಿಯುದ್ದಕ್ಕೂ ಆಡುಭಾಷೆಯನ್ನು ಸಮರ್ಪಕವಾಗಿ ಬಳಸಿಕೊಳ್ಳುವ ಮೂಲಕ ಓದುಗರನ್ನು ಆಕರ್ಷಿಸುವಲ್ಲಿ ಯಶಸ್ವಿಯಾಗಿದ್ದಾರೆ. ಅಲ್ಲಲ್ಲಿ ಗಾದೆಯ ಪ್ರಯೋಗವನ್ನು ಕಾಣಬಹುದಾಗಿದೆ.

'ಉತ್ತರನ ಪೌರುಷ ಒಲೆ ಮುಂದೆ' ಉತ್ತರನು ಹಾಸ್ಯ ಪ್ರಿಯ, ಸದಾ ಹೆಣ್ಣು ಮಕ್ಕಳೊಡನೆ ತನ್ನ ಪೌರುಷವನ್ನು ಕೊಚ್ಚಿಕೊಳ್ಳುತ್ತಾ ಇರುತ್ತಾನೆ. ಯುದ್ಧಕ್ಕೆ ಹೋಗಿ ಯುದ್ಧ ಮಾಡದೆ ಓಡುವ ಇವನನ್ನು ಬೃಹನ್ನಳೆ ಸುಧಾರಿಸಿ ಯುದ್ಧ ಮಾಡುತ್ತಾನೆ. ಆದ್ದರಿಂದಲೇ ಈ ಮಾತು ಗಾದೆಯಾಗಿ ಜನಜನಿತವಾಯಿತು.

'ಪುರುಷನೊಂದಿಗೆ ಬದುಕುವ ನಾರಿ ಯಾವಾಗಲೂ ಅವನ ಭಾಗ್ಯವನ್ನು ನಿರ್ಧರಿಸುತ್ತಾಳೆ...' ಎಂಬ ಮಾತು ದ್ರೌಪದಿಗೆ ಪಾಂಡವರಿಂದ, ಕೌರವರಿಂದ ಅಪಮಾನ ಅನುಭವಿಸಿದರೂ, ಅದರಲ್ಲೂ ಪಾಂಡವರ ಹೇಡಿತನದಿಂದ ತೀವ್ರ ಅವಮಾನ ಅನುಭವಿಸಿದರೂ ಗಂಡಂದಿರನ್ನು ರಕ್ಷಿಸಲು ಮುಂದಾಗುವುದು.

'ಪುರುಷರ ಪುರುಷಾರ್ಥಗಳ ನಡುವೆ ಸ್ತ್ರೀಯೊಬ್ಬಳನ್ನು ತಂದು ಅವಳ ಹೆಸರನ್ನು ದುರುಪಯೋಗಗೊಳಿಸದಿರು ಕೃಷ್ಣಾ' ಎಂಬ ಕರ್ಣನ ಮಾತುಗಳಿಂದಲೇ ತಿಳಿಯುತ್ತದೆ. ಕರ್ಣನ ಮನಸ್ಸು ಎಂತಹದೆಂದು, ಕೃಷ್ಣಾ ಕರ್ಣನನ್ನು ಕುಂತಿಯ ಮಗನೆಂದು ತಿಳಿಸಿ ಪಾಂಡವರಿಗೆ ಹಿರಿಯ ಪಾಂಡವರ ಕಡೆ ಬಂದರೆ ಕಾಲಕ್ರಮದಲ್ಲಿ ದ್ರೌಪದಿಯೂ ನಿನ್ನನ್ನು ಆರನೆಯ ಗಂಡನೆಂದು ಭಾವಿಸುತ್ತಾಳೆ ಎಂಬ ಮಾತನ್ನು ಕರ್ಣ ಮೇಲಿನ ವಾಕ್ಯ ನುಡಿದು ನಿರಾಕರಿಸುತ್ತಾನೆ.

'ಕಣ್ಣು ಕುರುಡು ಮಾಡಿಕೊಂಡು ತಾನೆಂತಹ ಒಳ್ಳೆಯ ಕೆಲಸ ಮಾಡಿದೆ' ಗಾಂಧಾರಿಯೂ ತನ್ನ ಕುರುಡು ಗಂಡನನ್ನು ನೋಡಲಾರೆ ಎಂಬಂತಹ ಭಾವದಿಂದ ಮದುವೆ ದಿನ ಆ ಕ್ಷಣಕ್ಕೆ ಕಣ್ಣಿಗೆ ಕಟ್ಟಿಕೊಂಡ ಬಟ್ಟೆಯಿಂದಾಗಿ ಅವನನ್ನು ಜೀವಮಾನ ಪೂರ್ತಿ ನೋಡದೆ ಹಾಗೆ ಇರುತ್ತಾಳೆ ಎಂತಹ ಪತಿವ್ರತೆ ಎಂದು ಘೋಷಿಸಿದರು. ಮುಂದಿನ ದಿನಗಳಲ್ಲಿ ಗಂಡನ-ಮಕ್ಕಳ ದುರಾಚಾರಗಳನ್ನು ನೋಡದಂತೆ ಮಾಡಿದದ್ದು ಇವಳಿಗೆ ಸಮಾಧಾನವನ್ನು ತಂದಿತ್ತು. ಅದರಿಂದಲೇ ತಾನು ಒಳ್ಳೆಯ ಕೆಲಸ ಮಾಡಿದ್ದೇನೆ ಎಂದು ಸಮಾಧಾನಪಡುತ್ತಿದ್ದಳು.

'ಮೂರು ಲೋಕದ ಗಂಡಂದಿರೆಂದು ಬಿರುದು ಬಾವಲಿಪಡೆದು ವಿಜೃಂಭಿಸುತ್ತಿದ್ದ ನನ್ನ ಪತಿಗಳು ಇಂದು ಎಲ್ಲಿ ಅಡಗಿ ಕುಳಿತಿದ್ದಾರೆ ನನ್ನನ್ನು ಕಾಯಲು ಬರದೆ ಎಂದು ತನ್ನ ಅಸಹಾಕತೆಯನ್ನು ದ್ರೌಪದಿ ವ್ಯಕ್ತಪಡಿಸುತ್ತಾಳೆ.

'ನರಿಯೊಂದಕ್ಕೆ ಹುಲಿ ಹೆದರಿ ಬಂದಂತೆ' ಎಂಬ ಮಾತನ್ನು ಧರ್ಮರಾಜ ಅರ್ಜುನನ್ನು ಕುರಿತಾಗಿ ಹೇಳುತ್ತಾನೆ. ಇಲ್ಲಿ ಕರ್ಣನನ್ನು ನರಿಗೆ ಹೋಲಿಸಿ ಅರ್ಜುನನ್ನು ಹುಲಿಗೆ ಹೋಲಿಸಿದ್ದಾನೆ. ಕರ್ಣನನ್ನು ಎದುರಿಸಿ ಅವನಿಂದ ಸೋಲನ್ನು ಅನುಭವಿಸಿದ ಧರ್ಮರಾಯ, ಅವನ ಮೇಲೆ ಯುದ್ಧಮಾಡಿ ಕರ್ಣನನ್ನು ಕೊಂದು ಅರ್ಜುನ ಬಂದೇಬರುತ್ತಾನೆ ಎಂಬ ಆಸೆ ಹುಸಿಯಾದಾಗ ಮೇಲಿನ ಮಾತುಗಳನ್ನು ಧರ್ಮರಾಯ ಹೇಳುತ್ತಾನೆ.



'ಬಿತ್ತಿದ್ದನ್ನು ಬೆಳೆದರು....' ಎಂಬ ಮಾತನ್ನು ಭಾನುಮತಿ ದ್ರೌಪದಿಯಲ್ಲಿ ಹೇಳುತ್ತಾಳೆ. ತನ್ನ ಗಂಡ ಮೋಸ, ದ್ವೇಷ ಇತ್ಯಾದಿಗಳನ್ನು ಭಿತ್ತಿ ಅದು ಬೆಳೆದು ಯುದ್ಧವಾಗಿ ಸಾವು-ನೋವು ಎಂಬ ಫಲವನ್ನು ನೀಡುತ್ತಿದೆ.

'ನನ್ನ ಮಗನಿಗೆ ನೀವು ಸಂಸ್ಕಾರ ಮಾಡಿದರೆ ಅವನ ಆತ್ಮ ಖಂಡಿತ ಅಳುತ್ತದೆ ಒಡೆಯಾ' ಹೀನ ಜಾತಿಯವನು ಸೂತಪುತ್ರ ಎಂದು ಬದುಕಿರುವ ತನಕ ನೀವೆಲ್ಲರೂ ನನ್ನ ಮಗನನ್ನು ತುಚ್ಚೀಕರಿಸುತ್ತಾ ದೂರೀಕರಿಸಿದವರೂ ಅವನ ಬದುಕನ್ನು ಅಸಹ್ಯಗೊಳಿಸಿದವರು ಅವನ ನೋವು ಎಷ್ಟಿತ್ತು ಎಂಬುದು ನನಗೆ ಗೊತ್ತು ಅದರಿಂದ ನೀವು ಸಂಸ್ಕಾರ ಮಾಡಬಾರದೆಂದು ಅತಿರಥ ಹೇಳುತ್ತಾನೆ.

'ಧಿಕ್ಕಾರ ಇರಲಿ ಹೆಣ್ಣುಗಳಿಗೆ ಧಿಕ್ಕಾರ ಇರಲಿ ಹೆಣ್ತನಕ್ಕೆ' ಎಂದು ಇಡೀ ಹೆಣ್ಣು ಕುಲವನ್ನು ಹಳಿದುಬಿಡುವ ಧರ್ಮರಾಯ, ಕುರುಕ್ಷೇತ್ರ ಯುದ್ಧಕ್ಕೆ ಕುಂತಿಯೇ ಕಾರಣ. ತಾನು ಹೆತ್ತ ಮಗ ಕರ್ಣ ಎಂದು ತಿಳಿದಿದ್ದರೂ ಅದನ್ನು ಹೇಳದೆಯೋ ಯುದ್ಧಕ್ಕೆ ಕಾರಣಳಾದ ತಾಯಿಯ ಮೂಲಕ ಇಡೀ ಹೆಣ್ಣುಕುಲವನ್ನು ನಿಂದಿಸುತ್ತಾನೆ.

'ಬೆತ್ತಲೆ ರಾಜ್ಯದಲ್ಲಿ ಬಟ್ಟೆ ಉಟ್ಟವರೇ ಹುಚ್ಚರು' ಎನ್ನುವಂತೆ ಯುದ್ಧಬೇಕು, ಬೇಕು ಎನ್ನುವ ಜನರ ಮಧ್ಯೆ ನಾನೊಬ್ಬ ಯುದ್ಧ ಬೇಡ ಎಂದು ಹೇಳಿ ನಾನೊಬ್ಬ ಹೇಡಿಯಾಗಿ ಎಲ್ಲರ ನಗುವಿಗೆ ಕಾರಣವಾಗುತ್ತದೆ. ಯುದ್ಧದ ರುದ್ರತಾಂಡವವನ್ನು ನೋಡಿಯಾದರೂ ಯುದ್ಧ ವಿರೋಧಿ ನಿಲುವು ತಾಳುವಂತಾಗಲಿ, ಕುರುಕ್ಷೇತ್ರ ಯುದ್ಧದ ಮೊದಲ ಪರಾಜಯ, ಮೊದಲ ಮರಣ, ನನಗೆ ಬರಲೆಂದು ಹಾರೈಸಿರಿ ಎಂದು ಉತ್ತರ ದ್ರೌಪದಿಯಲ್ಲಿ ನುಡಿದ ಮಾತುಗಳು ವಾಸ್ತವವಾಗಿಯೂ ಉತ್ತಮ ನಿಲುವಾಗಿದೆ.

## ಕಪ್ಪುಕಿವಿಯ ಬಿಳಿಯ ಕುದುರೆಗಳು

### ವಸ್ತು ಮತ್ತು ಸ್ವರೂಪ

ಪೌರಾಣಿಕ ವಸ್ತುವನ್ನು ಒಳಗೊಂಡಿರುವ ಈ ಕಾದಂಬರಿಯು ತನ್ನ ಒಡಲಲ್ಲಿ ವರ್ತಮಾನದ ಬದುಕಿನ ಹಲವು ಮುಖಗಳನ್ನು ಅನಾವರಣಗೊಳಿಸುತ್ತಾ ಹೋಗುತ್ತದೆ. ಆ ಮೂಲಕ ಸಾರ್ವಕಾಲಿಕ ಸತ್ಯವೊಂದನ್ನು ಸಾರುವ ಅಪರೂಪದ ಶಕ್ತಿಯಾಗಿ ಹೊರಹೊಮಿದೆ. ಮಹಾಭಾರತದಲ್ಲಿ ಬಂದು ಮಾಧವಿಯ ಜೀವನ ವೃತ್ತಾಂತವನ್ನು ಪ್ರಸ್ತುತ ಕಾದಂಬರಿಯು ಎಳೆ ಎಳೆಯಾಗಿ ವಿವರಿಸುತ್ತಾ ಸಾಗುತ್ತದೆ.

ಕಾದಂಬರಿಯೂ ಒಂದು ಸುಂದರ ಹಕ್ಕಿಗೂಡಿನ ಚಿತ್ರಣದೊಂದಿಗೆ ಆರಂಭ–ವಾಗುತ್ತದೆ. ಆ ಹಕ್ಕಿಗೂಡಿನಲ್ಲಿದ್ದ ಮರಿಹಕ್ಕಿಗೆ ತಾಯಿ ಹಕ್ಕಿಯೊಂದು ಊಟ ಮಾಡಿಸುತ್ತಿದೆ ಎಂಬ ರೆಪ್ಪೆ ಮಿಟುಕಿಸದೆಯೇ ನೋಡುತ್ತಿದ್ದ ಮಾಧವಿಯ ಚಿತ್ರಣದೊಂದಿಗೆ ಕಾದಂಬರಿ ಆರಂಭವಾಯಿತು. ಈ ಮಾಧವಿಯೂ ಲಕ್ಷ್ಮಿಯ ಮಗಳು. ಲಕ್ಷ್ಮಿ ಯಯಾತಿ ಮಹಾರಾಜನ ಅರಮನೆಯಲ್ಲಿ ದಾಸಿಯಾಗಿ ಕೆಲಸಮಾಡುತ್ತಿದ್ದಳು. ಅರಮನೆಯಲ್ಲಿ ಉಂಟಾಗಿದ್ದ ದೇವಯಾನಿಯ ನೋವು ಲಕ್ಷ್ಮಿಯನ್ನು ತಟ್ಟಿತ್ತು. ದೇವಯಾನಿಯ ಅಂತಃಪುರದ ಬಾಗಿಲನ್ನು ಕಾಯುವ ಊಳಿಗರಲ್ಲಿ ನಿರತಳಾಗಿದ್ದಳು. ಅಂತಃಪುರಕ್ಕೆ ಬಂದ ಮಹಾರಾಜರನ್ನು ದೇವಯಾನಿ ನಿರಾಕರಿಸಿದ್ದರಿಂದ ಕೋಪಗೊಂಡಿದ್ದ ಯಯಾತಿ ಮಹಾರಾಜ ಮಧ್ಯಸೇವನೆಯ ಅಮಲಿನಲ್ಲಿದ್ದುದರಿಂದ ಲಕ್ಷ್ಮಿಯ ಮೇಲೆ ಎರಗಿ ಅತ್ಯಾಚಾರ ಮಾಡಿದ್ದರು. ನಂತರ ಅರಮನೆಯಿಂದ ಮಹಾರಾಜರ ಪರವಾಗಿ ಹರಿತ ಕಳೆದುಕೊಂಡ ಕಠಾರಿಯೊಂದನ್ನು ಪುರೋಹಿತರು ತಂದು ಲಕ್ಷ್ಮಿಗೆ ವಿವಾಹ ನಡೆಸಿ ಮಂಗಳ ಸೂತ್ರ ಹಾಕಿಸಿದರು. ಇದರಿಂದಾಗಿ ಗರ್ಭಿಣಿಯಾದ ಲಕ್ಷ್ಮಿಗೆ ಹುಟ್ಟಿದ ಮಗಳೇ ಮಾಧವಿ.

ಲಕ್ಷ್ಮಿ ಯಾವಾಗಲೂ ನಿರ್ಲಿಪ್ತತೆ ಮತ್ತು ಸದಾ ಏನನ್ನೋ ಯೋಚಿಸುತ್ತಾ ಕುಳಿತಿರುತ್ತಿದ್ದಳು. ಹಾಗಾಗಿ ಮಾಧವಿಯ ಯೋಗಕ್ಷೇಮವನ್ನು ಆದಿಮನ ಅವ್ವ ಪಾರ್ವತಿಯೇ ವಿಚಾರಿಸಿಕೊಳ್ಳುತ್ತಿದ್ದಳು. ಕಾಲಕಳೆದಂತೆ ಮಾಧವಿಗೆ ಹದಿಮೂರು ವರ್ಷ ತುಂಬಿ ದೊಡ್ಡವಳಾಗಿದ್ದಳು. ಆದಿಮನು ದೊಡ್ಡವನಾದನು. ಆದಿಮ ಬದಲಾದ ಭಾವನೆಗಳೊಂದಿಗೆ ಮಾಧವಿಗೆ ಹತ್ತಿರನಾಗಲು ಆರಂಭಿಸಿದನು. ಮಾಧವಿ ಮಹಾರಾಜರ ಕುಡಿ ಎಂಬುದು ಪಾರ್ವತಿಯ ಬುದ್ಧಿಯಲ್ಲಿ ಸದಾ ಜಾಗೃತವಾಗಿ ಇರುತ್ತಿತ್ತು. ಹಾಗಾಗಿ ಪಾರ್ವತಿ ಅವರಿಬ್ಬರ ಒಡನಾಟವನ್ನು ಕಡಿಮೆಗೊಳಿಸಲು ಪ್ರಯತ್ನಿಸಿದಳಾದರೂ ಅವರ ಸನಿಹ ತೀವ್ರಗೊಂಡು ಪ್ರೀತಿ ಚಿಗುರೊಡೆದು ಆದಿಮ ನನ್ನ ಪ್ರೀತಿಯ ಹುಡುಗಿ ನೀನೇ ಆಗಬೇಕೆಂದು ಹೇಳಲು ಮಾಧವಿ ಆದಿಮನ ಬೆಚ್ಚನೆಯ ಪ್ರೀತಿಯನ್ನು ಒಪ್ಪಿಕೊಂಡಿದ್ದಳು. ಆ

ದಿನದ ರಾತ್ರಿ ಆದಿಮನಿಗೆ ಕನಸುಗಳೋ ಕನಸುಗಳು ಆ ಕನಸುಗಳ ಮಹಾರಾಣಿ ಮಾಧವಿಯೇ ಆಗಿದ್ದಳು. ಆದರೆ ಮಾಧವಿಗೆ ನಿದ್ದೆ ಬಾರದೆ ತಾನು ಆದಿಮ ಅವ್ವ ಅತ್ತೆ ಹೊಸದೊಂದು ಲೋಕ, ಹೊಸ ಸಂಬಂಧ, ಬೆಚ್ಚನೆಯ ಗೂಡು ಪ್ರೀತಿಯ ಬದುಕು ಕಲ್ಪನೆಯಲ್ಲಿಯೇ ಮುಳುಗಿ ಹೋಗಿದ್ದಳು ಮಾಧವಿ.

ಇತ್ತ ಗಾಲವ ಮುನಿ ವಿಶ್ವಾಮಿತ್ರನ ಶಿಷ್ಯರಾಗಿದ್ದು ಅವರಿಗೆ ಗುರು ದಕ್ಷಿಣೆಯನ್ನು ಕೊಡಬೇಕೆಂಬ ಹುಚ್ಚು ಹಠದಿಂದ ಅವರನ್ನು ಕೇಳಲಾಗಿ ಶರೀರವಿಡೀ ಬಿಳುಪಾಗಿದ್ದು ಒಂದು ಕಿವಿ ಮಾತ್ರ ಕಪ್ಪಾಗಿರುವಂತಹ ಎಂಟು ನೂರು ಕುದುರೆಗಳನ್ನು ಕೇಳಿದನು. ಅದರಿಂದ ಯಯಾತಿ ಮಹಾರಾಜರಲ್ಲಿ ಸಹಾಯ ಬಯಸಿ, ಯಯಾತಿಯ ಬಳಿಗೆ ಬಂದಿದ್ದನು. ಪುರುವಿನ ಯೌವನವನ್ನು ಪಡೆದುಕೊಂಡಿದ್ದ ಮಹಾರಾಜರು ನಿರಂತರ ಯುದ್ಧ ದಿಗ್ವಿಜಯ ವಿಲಾಸ ಜೀವನದಲ್ಲಿ ಮುಳುಗಿ ಖಾಲಿಯಾಗಿತ್ತು. ಗಾಲವರಿಗೆ ನೀಡಲು ವಿಶೇಷ ಕುದುರೆಗಳೂ ಇರಲಿಲ್ಲ. ಅಂತಹ ಕುದುರೆಗಳನ್ನು ಕೊಳ್ಳಲು ಸಂಪತ್ತನ್ನು ನೀಡಲು ಸಾಧ್ಯವಿರಲಿಲ್ಲ. ಗಾಲವರನ್ನು ಬರೀಗೈಯಲ್ಲಿ ಕಳುಹಿಸಲು ಇಷ್ಟಪಡದ ಮಹಾರಾಜ ತಮ್ಮ ಖ್ಯಾತಿಯ ಪ್ರತಿಪಾದನೆಗಾಗಿ ತತ್‌ಕ್ಷಣದಲ್ಲಿ ಹೊಳೆದ ಒಂದು ಸಾಧನವೇ ಮಾಧವಿ.

ದಾಸಿ ಲಕ್ಷ್ಮಿಯ ಮಗಳು ಮಾಧವಿಯ ಮೇಲೆ ತಮಗೆ ಸಂಪೂರ್ಣವಾಗಿ ಅಧಿಕಾರ ಇದೆಯೆಂದೇ ಅವರು ಭಾವಿಸಿದ್ದರು. ಅದೂ ರಾಣಿಯರಲ್ಲಿ ಹುಟ್ಟಿದ ಮಗಳಲ್ಲ! ದಾಸಿಯೋರ್ವಳಲ್ಲಿ ಹುಟ್ಟಿದ ಮಗಳು ಮತ್ತೊಬ್ಬ ದಾಸಿ?! ತಂದೆಯು ಆಗಿರುವ ಮಹಾರಾಜರ ಸೇವೆಗೆ ಅವಳು ಸಿದ್ಧಳಾಗಿರಬೇಕಿತ್ತು. ರಾಜಾಜ್ಞೆಯಂತೆ ಅರಮನೆಗೆ ಬಂದ ಮಾಧವಿಯನ್ನು ಯಯಾತಿ ಮಹಾರಾಜರು ಗಾಲವ ಮುನಿಗಳಿಗೆ ದಾನ ಮಾಡಿ 'ಅವಳನ್ನು ನಿಮಗೆ ಬೇಕಾದ ಕುದುರೆಗಳಿಗೆ ವಿನಿಮಯ ಮಾಡಿಕೊಳ್ಳಬಹುದು ಅಥವಾ ಅವಳನ್ನು ಉಪಯೋಗಿಸಿಕೊಂಡು ಕುದುರೆಗಳನ್ನು ಕೊಳ್ಳಲುಬೇಕಾದ ಸಂಪತ್ತನ್ನು ಆರ್ಜಿಸಿಕೊಳ್ಳುವುದು' ಎಂದು ಹೇಳಿ ತಮ್ಮ ಅಹಂ ಪ್ರತಿಷ್ಠೆಯನ್ನು ಮೆರೆದಿದ್ದರು. ಒಂದು ಹೆಣ್ಣನ್ನು ಒತ್ತೆ ಇಡುವುದೆಂದರೆ 'ದಾನ' ನೀಡುವುದೆಂದರೆ ಅದರರ್ಥ 'ಅದು ಅವಳ ದೇಹದ ಅನುಭೋಗವೇ ಹೊರತು ಮತ್ತೇನಲ್ಲ'ವೆಂದು ತಿಳಿದ ದೇವಯಾನಿ, ಶರ್ಮಿಷ್ಠೆ, ಪುರು ಎಲ್ಲರೂ ಮಹಾರಾಜರ ಕ್ರೌರ್ಯವನ್ನು ತಡೆಯಲು ಪ್ರಯತ್ನಿಸಿದರು ಅದು ಸಫಲವಾಗಲಿಲ್ಲ.

ಮಾಧವಿಯ ಮುಂದೆ ಯಯಾತಿ ದಾನದ ವಿಚಾರವನ್ನು 'ಮಗಳೇ ಮಗಳೇ' ಎನ್ನುತ್ತ ಪ್ರೀತಿಯ ಮುಖವಾಡ ಹಾಕಿ ತಿಳಿಸಿದ್ದ. ಮಾಧವಿ ಮಹಾರಾಜರಿಗೆ 'ನಾನು ನಿಮ್ಮ ಮಗಳು, ಸೂಳೆಯಲ್ಲ' ಎಂದು 'ನೀವು ನನ್ನ ತಂದೆಯೇ ಅಲ್ಲ' ತನ್ನನ್ನು ಹಳ್ಳಿಗೆ ಕಳುಹಿಸಿಕೊಡಿ ಎಂದು ಮದವೇರಿದ ಆನೆಯಂತೆ ವರ್ತಿಸಿದ್ದಳು. ಆದರೆ ಮಹಾರಾಜರ

ಆರ್ಭಟಕ್ಕೆ ಹೆದರಿ ಮಾಧವಿ ಮುದುರಿ ಕುಳಿತಳು. ತನ್ನ ಮೇಲಿನ ಕೋಪದಿಂದ ತನ್ನ ಜೀವವಾದ ಅವ್ವೆಗೆ ಮಹಾರಾಜ ಏನಾದರೂ ಮಾಡಿಬಿಟ್ಟರೇ? ಎಂಬ ಭಯದಿಂದ ಮಾಧವಿ ಮಹಾರಾಜರ ಸೇವೆಗೆ ಓರ್ವ ದಾಸಿಯಂತೆ ಸಿದ್ಧಳಾಗುತ್ತಾಳೇ.

ಮಾಧವಿ 'ಮಹಾರಾಜರು ನನ್ನ ದೇಹದ ಮೇಲೆ ತಮ್ಮ ಅಧಿಕಾರ ಸ್ಥಾಪಿಸಬಹುದು, ಅದನ್ನು ದಾನ ಮಾಡಬಹುದು, ದಾನ ಪಡೆದ ಮುನಿಗಳಿಗೂ ಅಷ್ಟೇ ನನ್ನ ದೇಹವನ್ನಷ್ಟೇ ತಮಗೆ ಬೇಕಾದಂತೆ ಉಪಯೋಗಿಸಿಕೊಳ್ಳಬಹುದು, ಆದರೆ ನನ್ನ ಮನಸ್ಸು....?! ನನ್ನ ಮನಸ್ಸು ನನ್ನದೇ ಆಗಿರುತ್ತದೆ. ನನ್ನದೇ ಮನಸ್ಸು ಅದೇ ನನ್ನ ಅಸ್ತಿತ್ವ ನನ್ನವ್ವೆಯ ಮಗಳಾಗಿಯೇ ಹಿಂದಿರುಗುತ್ತೇನೆ' ಎಂದು ದೃಢ ನಿರ್ಧಾರ ಮಾಡಿ ಮಹಾರಾಜರ ಆಜ್ಞೆ ಪರಿಪಾಲನೆಗಾಗಿ ಗಾಲವರ ಜೊತೆ ಹೊರಡಲು ಸಿದ್ಧಳಾದಳು.

ಯಯಾತಿ ಮಹಾರಾಜರು ಮಾಧವಿಯನ್ನು ಗಾಲವರಿಗೆ ದಾನವಾಗಿ ಒಪ್ಪಿಸಿದಾಗ ಮಾಧವಿ ಗಾಲವರನ್ನು ಕುರಿತು 'ನಾನು ಮಾಧವಿ ಅರಮನೆಯ ಊಳಿಗದಲ್ಲಿದ್ದ ದಾಸಿ ಲಕ್ಷ್ಮಿಯ ಮಗಳು. ನಿಮ್ಮ ಇಷ್ಟಾರ್ಥ ಸಾಧನೆಗೆ ಒಂದು ಸರಕಾಗಿ ಸಲಕರಣೆಯಾಗಿ ರಾಜತ್ವದ ಒತ್ತಾಯಕ್ಕೆ ಮಣಿದು ನಿಮ್ಮೊಡನೆ ಒತ್ತೆಯಾಗಿ ಬರುತ್ತಿದ್ದೇನೆ. ನಿಮ್ಮ ಕಾರ್ಯ ಸಾಧನೆ ಆದ ಬಳಿಕ ನಾನು ಸ್ವತಂತ್ರಳಾಗುತ್ತೇನೆ' ಎಂಬ ವಿಚಾರವನ್ನು ತಿಳಿಸಿ ಗಾಲವ ಮುನಿಗಳೊಂದಿಗೆ ಹೊರಟಳು.

ಹರ್ಯಶ್ವ ಮಹಾರಾಜರು ಬೇಟೆಗಾಗಿ ಕಾಡಿಗೆ ಬಂದಿದ್ದರು. ಆ ಜಾಗದಲ್ಲಿ ಆ ರಾತ್ರಿ ವಾಸ್ತವ್ಯ ಹೂಡಲು ಗಾಲವರು ಮನಸ್ಸಿನಲ್ಲಿ ಆಲೋಚಿಸಿದ್ದರು. ಈ ವಿಚಾರ ಹರ್ಯಶ್ವರಿಗೆ ತಿಳಿದು ಅವರನ್ನು ಸ್ವಾಗತಿಸಿದರು. ಮುನಿಗಳೊಂದಿಗೆ ಬಂದ ಮಾಧವಿಯ ಬಗ್ಗೆ ಹರ್ಯಶ್ವರು ಗಾಲವರಲ್ಲಿ ವಿಚಾರಿಸಿದರು. ಮಾಧವಿಯ ಸೌಂದರ್ಯವನ್ನು ನೋಡಿ ಆಕೆಯನ್ನು ಪಡೆಯಲು ಆ ವಿಶೇಷ ಇನ್ನೂರು ಕುದುರೆಗಳನ್ನು ಗಾಲವರಿಗೆ ನೀಡಲು ಮುಂದಾದರು. ಇನ್ನೂ ಕುದುರೆಗಳಿಗೆ ಪ್ರತಿಯಾಗಿ ಗಾಲವರು ಮಾಧವಿಯನ್ನು ಒಪ್ಪಂದದಂತೆ ಒಂದು ವರ್ಷದವರೆಗೆ ಹರ್ಯಶ್ವರಿಗೆ ಒಪ್ಪಿಸಿದರು. ಒಂದು ವರ್ಷದಲ್ಲಿ ಗಂಡು ಸಂತಾನವನ್ನು ಪಡೆದು ಬಳಿಕ ಆಕೆಯನ್ನು ಮುನಿಗಳೊಂದಿಗೆ ಕಳುಹಿಸಿಕೊಡಬೇಕಿತ್ತು. ಹರ್ಯಶ್ವ ತನ್ನ ಕೈಗೆ ಸಿಕ್ಕಿದ ಮಾಧವಿಯ ಮೇಲೆರಗಿ ರಸ ಹೀರಿ ಬಿಸಾಡಿದ ಕಬ್ಬಿನಂತೆ ಅವಳನ್ನು ಹೀರಿದನು.

ಹರ್ಯಶ್ವನಿಗೆ ಎರಡೂ ಹೆಣ್ಣು ಮಕ್ಕಳೇ ಗಂಡು ಸಂತಾನವಿರಲಿಲ್ಲ. ಹರ್ಯಶ್ವರು ಮಹಾರಾಣಿಯಿಂದ ದೂರವಿರಲು ಇದೂ ಒಂದು ಕಾರಣ. ಮಾಧವಿಯನ್ನು ಹರ್ಯಶ್ವರು ಅರಮನೆಗೆ ಕರೆತಂದಾಗ ಆಕೆಯ ದುರಂತದ ಕಥೆ ತಿಳಿದು ರಾಣಿ ಮರುಗಿದ್ದಳು. ಹಾಗಾಗಿ

ಮಾಧವಿಗೆ ಪ್ರತಿ ದಿನ ಹರ್ಯಶ್ವರಿಂದ ಆಗಬಹುದಿದ್ದ ನರಕದರ್ಶನ ಹಿಂಸೆ, ಆಕ್ರಮಣ ಯಾತನೆಯನ್ನು ಆದಷ್ಟು ಮಟ್ಟಿಗೆ ತಪ್ಪಿಸಿದ್ದಳು. ಹರ್ಯಶ್ವರ ಮೊದಲ ಆಕ್ರಮಣ–ದಿಂದಾಗಿಯೇ ಮಾಧವಿ ಅನಾರೋಗ್ಯಕ್ಕೆ ತುತ್ತಾಗಿದ್ದಳು. ಹರ್ಯಶ್ವರ ಮೊದಲ ಆಕ್ರಮಣದಿಂದಾಗಿಯೇ ಮಾಧವಿ ಗರ್ಭಿಣಿಯಾದಾಗ ಮಹಾರಾಣಿಯವರು ಅವಳನ್ನು ತಾಯಿಯಂತೆಯೇ ಪೋಷಿಸಿದ್ದಳು. ಯಾವ ತಾಯಿಗೇ ಆಗಲಿ ಮಗುವನ್ನು ನಿರಾಕರಿಸುವುದು ಆಕೆ ತನ್ನ ಪ್ರಾಣ ನಿರಾಕರಿಸುವಷ್ಟೇ ನೋವಿನ ವಿಷಯ. ಆದರೆ ಮಾಧವಿ ತಾನು ಹೆತ್ತ ಮಗುವನ್ನು ಬಿಟ್ಟು ಹೋಗುತ್ತಾಳೆಂಬುದನ್ನು ನೆನೆದು ಮಹಾರಾಣಿ ತುಂಬಾ ವೇದನೆಪಟ್ಟಿದ್ದರು. ಅಂತೆಯೇ ಮಾಧವಿ ಗಂಡುಮಗುವಿಗೆ ಜನ್ಮ ನೀಡಲು ಸುದ್ದಿ ತಿಳಿಯುತ್ತಿದ್ದಂತೆಯೇ ಗಾಲವರು ಅವಧಿ ಮುಗಿದ ಬಳಿಕ ಮಾಧವಿಯನ್ನು ಕರೆದೊಯ್ದರು.

ಹರ್ಯಶ್ವರ ಬಳಿ ಇನ್ನೂರು ಅಶ್ವಗಳಷ್ಟೇ ಸಿಕ್ಕಿದ್ದರಿಂದ ಇನ್ನೂ ಆರುನೂರು ಅಶ್ವಗಳನ್ನು ಸಂಪಾದಿಸಲು ಗಾಲವರು ಮಾಧವಿಯನ್ನು ಕರೆದುಕೊಂಡು ಪ್ರಯಾಣ ಬೆಳೆಸಿದರು. ಗಾಲವರಿಗೆ ಆ ವಿಶೇಷ ಕುದುರೆಗಳನ್ನು ಹೊಂದಿದ್ದ ಮತ್ತೊಬ್ಬ ಮಹಾಶಯ ಸಿಕ್ಕಿದ್ದ ಅವರೇ ದಿವೋದಾಸ ಮಹಾರಾಜರು ದಿವೋದಾಸ ಮಹಾರಾಜರು.

ದಿವೋದಾಸ ಮಹಾರಾಜರು ಬಹಳ ಒಳ್ಳೆಯ ವ್ಯಕ್ತಿ. ಧಾರ್ಮಿಕ ಸ್ವಭಾವದ ಧರ್ಮಬೀರು. ಆದರೆ ಭಗವಂತ ಅವರಿಗೆ ಮಕ್ಕಳ ಭಾಗ್ಯವನ್ನೇ ಕರುಣಿಸಿರಲಿಲ್ಲ. ರಾಜ್ಯ ಉತ್ತರಾಧಿಕಾರಿ ಇಲ್ಲದೆ ಅರಾಜಕತೆ ಕಡೆ ಸಾಗಿ ಬಿಡಬಹುದೆಂಬ ಆತಂಕದಲ್ಲಿದ್ದರೂ ಎರಡನೆಯ ವಿವಾಹದ ಬಗೆಗೆ ಯೋಚಿಸದಷ್ಟೂ ಧರ್ಮಾತ್ಮ ಮಹಾರಾಣಿಯವರೂ ಹಾಗೆಯೇ ಇದ್ದರು. ಇಬ್ಬರದೂ ಪ್ರೇಮ ವಿವಾಹ ಹೇಳಿ ಮಾಡಿಸಿದ ಜೋಡಿ ಅವರದಾಗಿತ್ತು. ಮಾಧವಿ ಇಲ್ಲಿಯೂ ಒಂದು ವರ್ಷದ ಅವಧಿಗೆ ಒತ್ತೆಯಾಗಿದ್ದಳು. ವಂಶೋದ್ಧಾರಕನನ್ನು ಪಡೆಯುವ ಹಿರಿಯರ ಹಂಬಲದಿಂದಾಗಿ ದಿವೋದಾಸರು ಮಾಧವಿಯಿಂದ ಗಂಡಸಂತಾನವನ್ನು ಪಡೆಯಲು ಬಯಸಿದ್ದರು. ಅದಕ್ಕಾಗಿ ತಮ್ಮ ಮತ್ತು ಮಾಧವಿಯ ನಡುವೆ ಪರಸ್ಪರ ಸಾಂಗತ್ಯ, ಸಹಚರ್ಯೆ ಸಂಬಂಧಗಳು ಮೂಡಬೇಕೆಂದು ಆಸೆಪಟ್ಟಿದ್ದರು. ಆದರೆ ಇದು ಮೂಡುವ ಕಲ್ಪನೆಯೇ ಇಲ್ಲವೆಂಬುದನ್ನು ತಿಳಿದು ಪಡೆದ ಗಡುವು ಮುಗಿಯುತ್ತಿದ್ದರಿಂದ ಅವರಿಗಿಷ್ಟವಿಲ್ಲದಿದ್ದರೂ ಮಾಧವಿಯ ಮೇಲೆ ಆಕ್ರಮಣ ಮಾಡಿಯೇಬಿಟ್ಟರು. ಇದರಿಂದಾಗಿ ಮಾಧವಿ ಗರ್ಭಧರಿಸಿ ಗಂಡುಸಂತಾನವನ್ನು ನೀಡಿ ಹೊರಟಳು.

ಮೂರನೆಯದಾಗಿ ಮಾಧವಿ ಉಶೀನರ ಮಹಾರಾಜರಿಗೆ ಒತ್ತೆಯಾದಳು. ಮೂವರು ಪತ್ನಿಯರಿದ್ದು ಹೆಣ್ಣು ಸಂತಾನವೂ ಸಾಕಷ್ಟಿದ್ದು ಹೆತ್ತವರನ್ನು ಸ್ವರ್ಗಕ್ಕೆ ಸೇರಿಸಲು ಗಂಡು

ಸಂತಾನ ಇರಲಿಲ್ಲ. ಅದರಿಂದ ನಾಲ್ಕನೆಯ ಮದುವೆಯ ಯೋಚನೆಯಲ್ಲಿ ಇದ್ದ ಇವರಿಗೆ ಬಯಸದೇ ಬಂದ ಭಾಗ್ಯದಂತೆ ಮಾಧವಿ ದೊರಕಿದ್ದಳು.

ಮಾಧವಿಯನ್ನು ನೋಡಿಕೊಳ್ಳಲು ಉಶೀನರು ಸೇವಂತಿ ಎಂಬ ದಾಸಿಯನ್ನು ನೇಮಿಸಿದ್ದರು. ಮಾಧವಿಯ ದುಃಸ್ಥಿತಿಯನ್ನು ಕಂಡು ದಿವೋದಾಸರು. ಮಲ್ಲಿಕಾ ಈವರೆಗೂ ಎಲ್ಲರೂ ದುಃಖಪಟ್ಟವರೆ! ಮರುಕ ಪಟ್ಟವರೆ! ಆದರೆ ಈ ಸೇವಂತಿ ಮಾತ್ರ ಆಕೆಯ ಸ್ಥಿತಿಯನ್ನು ಕುರಿತು ತುಚ್ಛೀಕರಿಸಿ ಮಾತನಾಡುತ್ತಿದ್ದಳು. ಮೊನ್ನೆ ಮೊನ್ನೆಯ ತನಕವೂ ಹಿರಿಯ ದೊರೆಗಳು ಅಂತಃಪುರ ಬಿಟ್ಟು ಕದಲದಿದ್ದವರು ಇತ್ತಿತ್ತಲಾಗಿ ಮಾಧವಿಯ ಕೋಣೆಗೆ ಬರುವುದನ್ನು ಅಭ್ಯಾಸ ಮಾಡಿಕೊಂಡಿರುವುದನ್ನು ಗಮನಿಸಿ ಸೇವಂತಿ ಮಾಧವಿಯನ್ನು "ಯಾವ ಲೋಕದಲ್ಲೂ ಕಾಣೆ ಕಾಣವ್ವ ಮಗನಿಗೂ ಅಪ್ಪನಿಗೂ ಬಲೆ ಬೀಸಿದ ಮಾಯಾಂಗನೆಯನ್ನು" ಎಂದು ವ್ಯಂಗ್ಯವಾಡುತ್ತಾಳೆ. ಮಾಧವಿ ಕೋಪಗೊಳ್ಳದೆ ಲೋಕದ ಜನರು ತನ್ನನ್ನು ನೋಡುವ ದೃಷ್ಟಿ ಸೇವಂತಿಯ ಮಾತುಗಳಲ್ಲಿದೆ ಎಂದು ಭಾವಿಸಿದ್ದಳು. ಉಶೀನರ ಪತ್ನಿಯರು, ತಾಯಿ ರಾಜಮಾತೆ ಎಲ್ಲರೂ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದರು. ರಾಜಮಾತೆಯ ಪ್ರೀತಿ ಆಕೆಗೆ ದೊಡ್ಡವ್ವೆಯವರನ್ನು ನೆನಪಿಸುತ್ತಿತ್ತು. ಅಷ್ಟರಲ್ಲಿಯೇ ಮಾಧವಿ ಗಂಡು ಮಗುವಿಗೆ ಜನ್ಮ ನೀಡಿ ನಿರಾತಂಕವಾಗಿ ಮಹಾರಾಣಿಯರಿಗೊಪ್ಪಿಸಿ ಹೋದಳು.

ಇನ್ನೂ ಉಳಿದ ಇನ್ನೂರು ಕುದುರೆಗಳು ಎಲ್ಲೂ ಸಿಗದಿದ್ದ ಕಾರಣ ಗಾಲವ ಮುನಿ ಮಾಧವಿಯನ್ನು ಕರೆದುಕೊಂಡು ವಿಶ್ವಾಮಿತ್ರರಲ್ಲಿಗೆ ಹೋಗಿ ಉಳಿದ ಕುದುರೆಗಳಿಗೆ ಪ್ರತಿಯಾಗಿ ತಾವೇ ಮಾಧವಿಯನ್ನು ಪರಿಗ್ರಹಿಸಿ ಒಂದು ಸಂತಾನವನ್ನು ಪಡೆದುಕೊಂಡರೇ ಗುರುದಕ್ಷಿಣೆ ಸಂದಂತೆ ಆಗುತ್ತದೆ ಎಂದರು. "ನೀನು ಮೊದಲೇ ಇವಳನ್ನು ನನ್ನ ಬಳಿಗೆ ಕರೆತಂದಿದ್ದರೆ ವಂಶ ಪ್ರವರ್ತಕರಾದ ನಾಲ್ವರು ಮಕ್ಕಳನ್ನು ನಾನೇ ಇವಳಿಂದ ಪಡೆಯಬಹುದಿತ್ತು! ಈಗಲಾದರೂ ಕರೆ ತಂದೆಯಲ್ಲ! ಎಂದು ಅವಳನ್ನು ಪರಿಗ್ರಹಿಸಿದನು. ಆಶ್ರಮದಲ್ಲಿ ಮಾಧವಿಯ ಬದುಕು ಆರಂಭವಾಗಿತ್ತು. ದಿನಕಳೆದಂತೆ ಇವಳಿಗೆ ಮೊದಲ ಮೂವರು ಮಹಾರಾಜರೊಂದಿಗೆ ಕಳೆದ ದಿನಗಳೇ ಸಹ್ಯವೆನಿಸಿದ್ದವು. ಇಲ್ಲಿಯೂ ಒಂದು ಗಂಡುಮಗುವನ್ನು ಹೆತ್ತು ವಿಶ್ವಾಮಿತ್ರನಿಗೆ ನೀಡಿ ಗಾಲವ ಮುನಿಯೊಂದಿಗೆ ಯಯಾತಿ ಅರಮನೆಗೆ ಬಂದಳು.

ಯಯಾತಿ ತಮ್ಮ ಮಗಳು ತಮ್ಮ ಸತ್ಯವಾಕ್ಯದ ಪರಿಪಾಲನೆಯನ್ನು ಚಾಚೂತಪ್ಪದೇ ನಡೆಸಿಕೊಡಲು ಸಂತಸಗೊಂಡು ಮಾಧವಿಯ ಸ್ವಯಂವರವನ್ನು ಏರ್ಪಡಿಸಲು ಮುಂದಾಗುತ್ತಾನೆ. ಮಾಧವಿ ಮಹಾರಾಜರ ಬಳಿ "ನನ್ನನ್ನು ನಿಮ್ಮ ದಾಸ್ಯದಿಂದ

ಬಿಡುಗಡೆಗೊಳಿಸಿ ನನ್ನ ಸ್ವಾತಂತ್ರ್ಯವನ್ನು ನನಗೆ ಮರಳಿ ಕೊಡಿ' ಎಂದಳು. ಮಾಧವಿಯ ಕೋರಿಕೆಗೆ ಒಪ್ಪಿಗೆ ನೀಡಿದ. ಯಯಾತಿ ಮಹಾರಾಜನ ಮೇಲೆ ಅವರ ಗುಣಗಳಾದ ಸ್ವಾರ್ಥ, ಅಹಂಕಾರ, ರಾಜಕಾರಣ, ಪ್ರಭುತ್ವ, ಕೀರ್ತಿ, ಖ್ಯಾತಿ ಹೀಗೆ ಎಲ್ಲದರ ಮೇಲೆ ದಿಗ್ವಿಜಯ ಸಾಧಿಸಿದ್ದಳು. ತಾನು ಹಳ್ಳಿಗೆ ಮರುಳುವುದಾಗಿ ದೊಡ್ಡವ್ವೆಯರು ಅಣ್ಣ ಪುರುವಿಗೆ ತಿಳಿಸಿದಳು ಅವರು ಬೇಡವೆಂದರೂ ಅವರನ್ನು ಸಮಾಧಾನಿಸಿ ರಥದಲ್ಲಿ ಕುಳಿತೇ ಬಿಟ್ಟಳು.

ಮಾಧವಿ ಕುಳಿತಿದ್ದ ರಥ ಮನೆಯ ಮುಂದೆ ನಿಂತಾಗ ಮಬ್ಬುಗತ್ತಲು ಇಡೀ ಭೂಮಿಯನ್ನು ಆವರಿಸಿತ್ತು. ಎಲ್ಲ ಮನೆಗಳಲ್ಲೂ ದೀಪಹಚ್ಚಲ್ಪಟ್ಟಿದ್ದವು. ಮಾಧವಿಯ ಮನೆಯಲ್ಲಿ ದೀಪ ಹೊತ್ತಿಸಿರಲಿಲ್ಲ. ಕತ್ತಲಾದ ಮನೆಯೊಳಗೆ ಮಾಧವಿ ಅಡಿ ಇಡುತ್ತಾ ಅವಳ ಒಡಲಿನಿಂದ ನರ ನರವೂ ಹುರಿಗೊಂಡು 'ಅವ್ವೆ' ಎಂಬ ಪದ ಹೊರಟಿತ್ತು. ಮೂಲೆಯೊಂದರಲ್ಲಿ ಕುಳಿತ್ತಿದ್ದ ಲಕ್ಷ್ಮಿ ದಢಕ್ಕನೆ ಎದ್ದಿದ್ದಳು. ಲಕ್ಷ್ಮಿ ಮಾಧವಿ ಎಂದು ಕರೆದಾಗ ಧ್ವನಿ ಬಂದತ್ತ ಓಡಿದ್ದ ಮಾಧವಿ ಅವ್ವೆಯನ್ನು ಬಿಗಿದಪ್ಪಿದಳು. ಮಾಧವಿ ಹಿಂತಿರುಗಿದ್ದು, ಲಕ್ಷ್ಮಿಗೆ ಅಗಾಧ ಸಂತಸ ತಂದಿತ್ತು. ಮನೆಯಲ್ಲಿ ದೀಪಗಳು ಬೆಳಗತೊಡಗಿದ್ದವು. ಪರಸ್ಪರ ಇಬ್ಬರೂ ಅಳುತ್ತಿದ್ದರು. ಮಾಧವಿ ಅಳು ನಿಲ್ಲಿಸಿ 'ಅಳದಿರು ಅವ್ವೆ ಇನ್ನೆಂದೂ ನಾನು ನಿನ್ನನ್ನು ಬಿಟ್ಟು ಎಲ್ಲಿಯೂ ಹೋಗುವುದಿಲ್ಲ ನಾನೀಗ ಸ್ವತಂತ್ರಳಿದ್ದೇನೆ' ಎಂದಳು.

ಮಾಧವಿ ತನ್ನ ನಾಲ್ಕು ವರ್ಷದ ಹಿಂದಿನ ವಿಷಯವನ್ನು ಹೇಳಿದಳು. ಲಕ್ಷ್ಮಿ ಮಗಳ ಭವಿಷ್ಯವನ್ನು ನೆನೆದು ದುಃಖಿಸಿದಳು. ಇದು ಪಾರ್ವತಿಗೂ ತಿಳಿಯಿತು. ಮಾಧವಿಯ ಬಗೆಗೆ ಪ್ರೀತಿ, ಮರುಕ ಇದ್ದರೂ ಪಾರ್ವತಿ ಮಾಧವಿಯನ್ನು ತನ್ನ ಸೊಸೆಯೆಂದು ಆದಿಮನ ಮಡದಿಯೆಂದು ಒಪ್ಪಿಕೊಳ್ಳಲು ಸಾಧ್ಯವಿರಲಿಲ್ಲ. ಮಾಧವಿ ಊರಿಗೆ ಬಂದು ಹದಿನೈದು ದಿನಗಳಾದರೂ ಆದಿಮನನ್ನು ನೋಡಲಾಗಿರಲಿಲ್ಲ. ಒಮ್ಮೆ ಆದಿಮನನ್ನು ಭೇಟಿಯಾಗಿ ಮಾತುಕತೆಗಳು ನಡೆದವು. ಈ ಮಾತುಕತೆಯಲ್ಲಿ ಆದಿಮ ಮಾಧವಿಯನ್ನು ಕುರಿತು 'ನನ್ನ ಪ್ರೀತಿ ಒಂದಲ್ಲ ಒಂದು ದಿನ ನಿನ್ನನ್ನು ಮಣಿಸಬಹುದೆಂಬ ಆಸೆಯನ್ನು ಮಾತ್ರ ಬಿಟ್ಟುಕೊಡಲು ನಾನು ಸಿದ್ದನಿಲ್ಲ' ಎಂಬ ಭರವಸೆಯ ಮಾತುಗಳನ್ನಾಡುತ್ತಾನೆ. ಇದು ಮಾಧವಿಗೆ ಇಷ್ಟವಿಲ್ಲದಿದ್ದರೂ ಅಶಾಂತಿಯನ್ನು ತಂದರೂ ಆಶಾಕಿರಣವೂ ಆಗುತ್ತದೆ. ಪ್ರಕೃತಿ, ಹಕ್ಕಿಗೂಡಿನ ವರ್ಣನೆಯೊಂದಿಗೆ ಮುಂದಿನ ತಮ್ಮ ಹೊಸ ಜೀವನವನ್ನು ಸ್ವಾಗತಿಸುವ ಚಿತ್ರಣದೊಂದಿಗೆ ಕಾದಂಬರಿ ಮುಕ್ತಾಯವಾಗುತ್ತದೆ.

## ಕಪ್ಪು ಕಿವಿಯ ಬಿಳಿಯ ಕುದುರೆಗಳು

### ಸನ್ನಿವೇಶ ನಿರ್ವಹಣೆ:

ಡಾ. ಎಂ.ಎಸ್.ವೇದಾರವರ ಬತ್ತಳಿಕೆಯಿಂದ ಮೂಡಿಬಂದ ಅದ್ಭುತ ಕಾದಂಬರಿಯೇ "ಕಪ್ಪು ಕಿವಿಯ ಬಿಳಿಯ ಕುದುರೆಗಳು" ಈ ಕಾದಂಬರಿಯಲ್ಲಿ ಬರುವ ಎಲ್ಲಾ ಸಂದರ್ಭ, ಸನ್ನಿವೇಶಗಳು ಉತ್ತಮವೇ ಆಗಿದ್ದು ಕಾದಂಬರಿಯ ದಿಕ್ಕನ್ನು ಬದಲಾಯಿಸುವ ಸಾಮರ್ಥ್ಯವನ್ನು ಹೊಂದಿವೆ. ಅಂತಹ ಸನ್ನಿವೇಶಗಳಲ್ಲಿ ಬಹುಮುಖ್ಯವಾದ ಎರಡು–ಮೂರು ಸನ್ನಿವೇಶವನ್ನು ವಿವರಿಸಲು ಪ್ರಯತ್ನಿಸುತ್ತಿದ್ದೇನೆ.

**ಅ) ಲಕ್ಷ್ಮಿಯ ಅತ್ಯಾಚಾರ**

ಲಕ್ಷ್ಮಿಯು ಶರಭಯ್ಯನ ಮಗಳು. ಇವನು ಅರಮನೆಯಲ್ಲಿ ಪಹರೆ ಕಾಯುವ ನೂರು ಆಳುಗಳ ಮುಖ್ಯಸ್ಥನಾಗಿದ್ದ. ಸ್ನೇಹಿತರ ಸಲಹೆಯಂತೆ ಲಕ್ಷ್ಮಿಯನ್ನು ಅರಮನೆಯ ಊಳಿಗಕ್ಕೆ ಕಳುಹಿಸಲು ನಿರ್ಧರಿಸಿದನು. ಇದನ್ನು ಒಪ್ಪದ ಲಕ್ಷ್ಮಿಯ "ಬೇಡ ಅಪ್ಪಯ್ಯಾ ನಾನು ಊಳಿಗಕ್ಕೆ ಹೋಗುವುದಿಲ್ಲ. ಪಾರ್ವತಿಯ ಹಾಗೆ ಮದುವೆಯಾಗುತ್ತೇನೆ. ಸಂಸಾರ ಮಾಡುತ್ತೇನೆ. ಮಕ್ಕಳನ್ನು ಹೆರುತ್ತೇನೆ, ಸಾಕುತ್ತೇನೆ, ಹೆಂಡತಿಯಾಗುತ್ತೇನೆ, ಅವ್ವನಾಗುತ್ತೇನೆ, ಅಜ್ಜಿಯಾಗುತ್ತೇನೆ, ಊಳಿಗಕ್ಕೆ ಹೋಗುವುದಿಲ್ಲ" ಎಂದಿದ್ದಳು. ಆದರೆ ಪಾರ್ವತಿಯ ಗಂಡನ ಸಾವಿನ ಸುದ್ದಿ ತಿಳಿದು ಗಂಡ, ಮನೆ, ಸಂಸಾರ ಎಲ್ಲ ಇಷ್ಟು ಕ್ಷಣಿಕವೇ? ಎಂದು ಊಳಿಗಕ್ಕೆ ಹೋಗಲು ನಿರ್ಧರಿಸಿದಳು. ಅರಮನೆಯ ಊಳಿಗಕ್ಕೆ ಬಂದ ಮೇಲೆ ಇವನ ಇಡೀ ಜೀವನವೇ ಬದಲಾಯಿತು. ಮನೆಯಲ್ಲಿ ಕೆಲಸ ಮಾಡಲು ತಂದೆ ಇಬ್ಬರು ಊಳಿಗದವರನ್ನು ನೇಮಿಸಿದ ಅರಮನೆಯಲ್ಲಿ ಹಂತಹಂತವಾಗಿ ಊಳಿಗ ಕೆಲಸ ಬದಲಾಗಿ ದೇವಯಾನಿಯ ಅಂತಃಪುರದ ಬಳಿ ಬಾಗಿಲು ಕಾಯುವ ಕೆಲಸಕ್ಕೆ ನೇಮಕವಾಗಿದ್ದಳು.

ಅಂದು ಅಂತಃಪುರಕ್ಕೆ ಬಂದ ಮಹಾರಾಜ ಯಯಾತಿ ದೇವಿ ದೇವಯಾನಿಯನ್ನು ಒಲಿಸಿಕೊಳ್ಳಲಾಗದೆ ಸೋತು ಕಣ್ಣುಗಳನ್ನು ಕೆಂಪು ಮಾಡಿಕೊಂಡು ಹೊರ ಬಂದಿದ್ದರು. ಇವರ ಕಣ್ಣಿಗೆ ಲಕ್ಷ್ಮಿ ಬಿದ್ದಳು "ಯಾರು ನೀನು?" ಮಹಾರಾಜರ ಕಿವಿ ಸೇರುವ ಮುನ್ನವೇ ಅವರ ಬಾಯಿಂದ ಮಧ್ಯದ ವಾಸನೆ ಮೂಗನ್ನು ಅಡರಿತ್ತು. ಲಕ್ಷ್ಮಿ ಹುಲಿಯ ಮುಂದೆ ನಿಂತ ಹರಿಣಿಯಂತೆ ಸ್ತಬ್ಧಳಾಗಿದ್ದಳು. ಇದ್ದಕ್ಕಿದ್ದಂತೆ ಮಹಾರಾಜರು ಇವಳ ಕೈಹಿಡಿದು ಎಳೆದುಕೊಂಡು ಹೋಗಿ ಕೋಣೆಯ ಬಾಗಿಲನ್ನು ಹಾಕಿಕೊಂಡಿದ್ದರು. ಮಹಾರಾಜರಿಗೆ ಲಕ್ಷ್ಮಿ ಅತ್ಯಾಚಾರಕ್ಕೆ ಒಳಗಾಗಿದ್ದಳು. ಇದರ ಫಲವಾಗಿಯೇ ಮಾಧವಿಯ ಜನನವಾಯಿತು. ಲೇಖಕಿ ಪೌರಾಣಿಕ ಕಾದಂಬರಿಯಲ್ಲಿ ಇಲ್ಲದ ಲಕ್ಷ್ಮಿ ಎಂಬ ಪಾತ್ರವನ್ನು ಸೃಷ್ಟಿಸಿ ಮಾಧವಿಯು ಯಾರ ಮಗಳು, ಅವಳಿಗೂ – ರಾಜನಿಗೂ ಏನು ಸಂಬಂಧ ಎಂಬಿತ್ಯಾದಿ ಪ್ರಶ್ನೆಗಳಿಗೆ

ಎಡೆಮಾಡಿಕೊಡದೆ ಹೊಸ ಪಾತ್ರ ಸೃಷ್ಟಿಸಿ ಎಲ್ಲಾ ಪ್ರಶ್ನೆಗಳಿಗೂ ಉತ್ತರ ನೀಡಿದ್ದಾರೆ. ಈ ಘಟನೆಯೇ ಮುಂದೆ ಕಾದಂಬರಿ ಮುಂದುವರಿಯಲು ಸಾಧ್ಯವಾಗುತ್ತದೆ.

**ಆ) ಮಾಧವಿಯ ಧಾನ:**

ಮಾಧವಿಯ ದಾನವೇ ಈ ಕಾದಂಬರಿಯ ತಿರುಳು. ಹಿಂದೆ ಎಲ್ಲಿಯೂ ಕೇಳಿರದಂತಹ ದಾನವನ್ನು ಯಯಾತಿ ಮಹಾರಾಜರು ಮಾಡಿದರು. ಮಹಾರಾಜರು ಕುಡಿದ ಅಮಲಿನಲ್ಲಿ ನಡೆಸಿದ ಘಟನೆಯಿಂದ ಅವರಿಗೆ ಅರಿವಿಲ್ಲದೆ ಹುಟ್ಟಿದ ಮಗಳು. ಎಂದೋ ತನ್ನ ಮಗಳ ಮುಖ ನೋಡದಿದ್ದ ಯಯಾತಿ ಗಾಲವ ಮುನಿಯು ವಿಶ್ವಾಮಿತ್ರನಿಗೆ ನೀಡಬೇಕಾದ ಗುರುದಕ್ಷಿಣೆಗಾಗಿ ಸಹಾಯ ಬೇಡಿದಾಗ ಹಣವಿಲ್ಲದ ಕಾರಣ ಕಪ್ಪು ಕಿವಿಯ ಕುದುರೆಗಳು ಇಲ್ಲದ ಕಾರಣವಾಗಿ ನೋಡೇ ಇರದ ಮಗಳನ್ನು ಗಾಲವ ಮುನಿಗೆ ದಾನ ಮಾಡಲು ನಿರ್ಧರಿಸಿದ್ದನು.

ಎಲ್ಲ ರೀತಿಯಿಂದಲೂ ಅವಳು ನಿಮ್ಮ ಆಸೆ ಈಡೇರಿಸುವವಳೆ. ಅವಳನ್ನು ನಿಮಗೆ ಬೇಕಾದ ಕುದುರೆಗಳಿಗೆ ವಿನಿಮಯ ಮಾಡಿಕೊಳ್ಳಬಹುದು. ಈ ಯಯಾತಿಯ ಮಗಳ ಸೌಂದರ್ಯಕ್ಕೆ ಅವಳ ವಿನಿಮಯಕ್ಕೆ ಈ ಜಗತ್ತಿನಲ್ಲಿ ವಿನಿಮಯವಾಗದೇ ಉಳಿಯುವಂಥದ್ದು ಏನಾದರೂ ಇರಲು ಸಾಧ್ಯವೆ ಎಂಬ ಅಹಂಕಾರದ ನುಡಿಯೊಂದಿಗೆ ಕಂಡಿಲ್ಲದ, ಕೇಳಿಲ್ಲದ ಜವಾಬ್ದಾರಿ ನಿರ್ವಹಿಸಿರದ ಸಂಬಂಧವೇ ಗುರುತಾಗದಿದ್ದ ಮಗಳ ಬಗೆಗೆ ಅಹಂ ಮತ್ತು ಗರ್ವಗಳನ್ನು ಮೆರೆದಿದ್ದರು. ತಮ್ಮ ಸ್ವಾರ್ಥಕ್ಕಾಗಿ ಗುರುತಿಸದೇ ಬಿಟ್ಟ ಸಂಬಂಧವನ್ನು ಇದ್ದಕ್ಕಿದ್ದಂತೆಯೇ ಗುರುತಿಸಿ ಕಂಡೇ ಇರದ ಮಗಳನ್ನು ಮತ್ತಾರೋ ಮುನಿಯೊಬ್ಬನ ಜೊತೆ ದಾನ ಮಾಡಿ ಇಲ್ಲವೆ ಒತ್ತೆ ಇಟ್ಟುಬಿಡುವ ಕ್ರೌರ್ಯಕ್ಕಿಂತ ಮತ್ತೊಂದು ಕ್ರೌರ್ಯವಿರಲು ಸಾಧ್ಯವೇ ಆದರೆ ಯಯಾತಿ ಇಲ್ಲಿ ಅಜ್ಞಾನದಿಂದ ಸ್ವಾರ್ಥಕ್ಕಾಗಿ ತನ್ನ ಉಳಿವಿಗಾಗಿ ಗೌರವ ಘನತೆಗಾಗಿ ಮಗಳನ್ನೇ ದಾನ ಮಾಡಿದ ಮಹಾದಾನಗಾರನಾಗುತ್ತಾನೆ.

**ಇ) ಮಾಧವಿಯ ಒತ್ತೆಯ ಯಾತ್ರೆ:**

ಗಾಲವ ಮುನಿಯೊಂದಿಗೆ ಕಾಡುಮೇಡು ಅಲೆದು ಬಂದ ಮಾಧವಿ ಮೊದಲು ಒತ್ತೆಯಾಗಿದ್ದು ಹರ್ಯಶ್ವ ಮಹಾರಾಜರಿಗೆ ಹಸಿದ ಹುಲಿಯಂತೆ ಮಾಧವಿಯನ್ನು ನೋಡಿ ಬಯಸಿದ ಹರ್ಯಶ್ವನಿಗೆ ಗಾಲವಮುನಿಇನ್ನೂರು ವಿಶೇಷ ಅಶ್ವಗಳಿಗೆ ಪ್ರತಿಯಾಗಿ ಒಂದು ವರ್ಷ ನಿನ್ನಲ್ಲಿಯೇ ಇಟ್ಟುಕೊಂಡು ಗಂಡು ಸಂತಾನವನ್ನು ಪಡೆಯುವಂತೆ ಹೇಳಿದನು. ಮಾಧವಿಯ ಅನಾರೋಗ್ಯದಿಂದ ಬಳಲುತ್ತಾ ಮಲಗಿರುವಾಗಲೇ ಹರ್ಯಶ್ವ ಅವಳ ಮೇಲೆ ದಾಳಿ ಮಾಡಿಬಿಟ್ಟ ಇದರಿಂದಾಗಿ ಗರ್ಭಿಣಿಯಾದ ಮಾಧವಿ ಹರ್ಯಶ್ವರ ಮಹಾರಾಣಿಯ ಪ್ರೀತಿ ಆರೈಕೆಯೊಂದಿಗೆ ಗಂಡು ಮಗುವಿಗೆ ಜನ್ಮ ನೀಡಿದಳು.

ನಂತರದಲ್ಲಿ ಎರಡನೆ ಬಾರಿ ದಿವೋದಾಸರಿಗೆ ಒತ್ತೆಯಾದಳು. ಇವನು ಧರ್ಮವಂತನಾಗಿದ್ದು, ಐಶ್ವರ್ಯದೇವಿಯನ್ನು ಪ್ರೀತಿಸಿ ವಿವಾಹವಾದರು. ಆದರೂ ಇವರಿಗೆ ಸಂತಾನ ಭಾಗ್ಯವಿರಲಿಲ್ಲ. ಎರಡನೆ ಮದುವೆಯ ಯೋಚನೆಯನ್ನು ಮಾಡದಷ್ಟು ಒಳ್ಳೆಯತನವಿತ್ತು ಇವರಲ್ಲಿ. ಅದರಿಂದಲೇ ಇನ್ನೂರು ಅಶ್ವಗಳಿಗೆ ಪ್ರತಿಯಾಗಿ ಒಂದು ವರ್ಷದ ಕಾಲದವರೆ ಮಾಧವಿಯನ್ನು ಕೊಂಡು ಆ ಮೂಲಕ ಸಂತಾನವನ್ನು ಪಡೆಯಲು ಬಯಸಿದರು. "ಸಂತಾನಕ್ಕಾಗಿ ನಿನ್ನನ್ನು ಹೊಂದಲು ಬಯಸಿದ್ದೇನೆ ಅಷ್ಟೆ. ಕಾಮ ಅಲ್ಲಿ ನೆಪ ಮಾತ್ರವಲ್ಲದೆ, ಅದೇ ಗುರಿಯಲ್ಲ ನನಗೆ" ಎಂದು ಮಹಾರಾಜ ಮಾಧವಿಯ ಮುಂದೆ ಹೇಳಿ ಮಾಧವಿ ಸಾಂಗತ್ಯ ಸಹಚರ್ಯಕ್ಕಾಗಿ ಕಾಯುತ್ತಿದ್ದರು. ಕಾಲದ ಮಿತಿ ಇದ್ದುದರಿಂದ ಮಹಾರಾಣಿಯ ಮಾತಿನಿಂದಾಗಿ ದಿವೋದಾಸರು ತಮಗೆ ಇಷ್ಟವಿಲ್ಲದಿದ್ದರೂ ಅವಳ ಮೇಲೆ ಆಕ್ರಮಣ ಮಾಡಿದರು. ಇದರಿಂದಾಗಿ ಗಂಡು ಸಂತಾನವನ್ನು ಹೆತ್ತುಕೊಟ್ಟು ಮುಂದೆ ನಡೆದಳು.

ಮಾಧವಿ ಮೂರನೆ ಬಾರಿಗೆ ಉಶೀರ ಮಹಾರಾಜನ ಒತ್ತೆಯಾಗಿದ್ದಳು. ಆದರೆ ಇವರ ದುರಾದೃಷ್ಟವೊ ಏನೋ ಎಂಬಂತೆ ಈ ರಾಜನಲ್ಲೂ ಕೂಡ ಇದ್ದದ್ದು ಇನ್ನೂರು ಕುದುರೆಗಳು ಮಾತ್ರ. ಉಶೀರ ಮಹಾರಾಜರಿಗೆ ಮೂವರು ಹೆಂಡತಿಯರಿದ್ದು ಹೆಣ್ಣು ಸಂತಾನವೂ ಬಹಳಷ್ಟು ಇತ್ತು. ಗಂಡು ಸಂತಾನಕ್ಕಾಗಿ ಮಾಧವಿಯನ್ನು ಒಲಿದರು. ಆದರೆ ಮಾಧವಿಗೆ ಇಲ್ಲಿ ಸಿಕ್ಕ ಸೇವಂತಿ ಎಂಬ ದಾಸಿಯ ಚುಚ್ಚು ನುಡಿಗಳು, ಉಶೀರ ರಾಜರ ತಂದೆಯ ನಡವಳಿಕೆಗಳು ಇಷ್ಟವಾಗಗಿದ್ದರೂ ಅದನ್ನು ಅನುಭವಿಸಿಕೊಂಡು ಗಂಡು ಮಗುವನ್ನು ಹೆತ್ತುಕೊಟ್ಟಳು. ಇಲ್ಲಿ ಉಶೀರರ ರಾಜಮಾತೆ, ಮಡದಿಯರ ಇವಳನ್ನು ಪ್ರೀತಿ ಅಕರೆಯಿಂದ ನೋಡಿಕೊಂಡು ಅವಳನ್ನು ಕಳುಹಿಸಿದರು.

ನಂತರದಲ್ಲಿ ಗಾಲವ ಮುನಿಗಳಿಗೆ ಯಾವ ರಾಜನಲ್ಲಿಯೂ ಕಪ್ಪುಕಿವಿಯ ಬಿಳಿಯ ಕುದುರೆಗಳು ಸಿಗದಿದ್ದಾಗ ತನ್ನ ಗುರು ವಿಶ್ವಾಮಿತ್ರರಲ್ಲಿಗೆ ಹೋಗಿ ಮಾಧವಿಯನ್ನು ಪರಿಗ್ರಹಿಸಿ ಉಳಿದ ಇನ್ನೂರು ಕುದುರೆಗಳಿಗೆ ಅರ್ಜಿಸಿಕೊಳ್ಳಲು ಹೇಳುತ್ತಾನೆ. ಇವನ ಮಾತು ಮುಗಿಯುವುದರೊಳಗಾಗಿ ವಿಶ್ವಾಮಿತ್ರ ಇವಳನ್ನೂ ಮೊದಲೇ ಕರೆ ತರಬಾರದಿತ್ತೆ. ವಂಶ ಪ್ರವರ್ತಕರಾದ ನಾಲ್ವರು ಗಂಡು ಮಕ್ಕಳನ್ನು ಇವಳಿಂದ ನಾನೇ ಪಡೆದುಕೊಳ್ಳಬಹುದಿತ್ತು ಎಂಬ ಮಾತು ಕೇಳಿದ ಇಬ್ಬರಿಗೂ ತಲೆ ತಿರುಗಿದ ಸ್ಥಿತಿ ಉಂಟಾಯಿತು. ಇಲ್ಲಿಯೂ ಮಾಧವಿ ವರ್ಷದ ಒಳಗೆ ಗಂಡುಮಗುವನ್ನು ಹೆತ್ತುಕೊಟ್ಟು ಋಣಮುಕ್ತಳಾದಳು. ಲೇಖಕಿಯೂ ಮೇಲಿನ ಎಲ್ಲಾ ಪಾತ್ರಗಳ ಮೂಲಕ ಪುರುಷರ ದೌರ್ಬಲ್ಯಗಳಿಗೆ ಸ್ತ್ರೀ ಹೇಗೆ ಬಲಿಯಾಗುತ್ತಾಳೆ ಎಂಬುದನ್ನು ಚಿತ್ರಿಸಿದ್ದಾರೆ.

**ಪಾತ್ರ ನಿರ್ವಹಣೆ**

'ಕಪ್ಪು ಕವಿಯ ಬಿಳಿಯ ಕುದುರೆಗಳು' ಎಂಬ ಕಾದಂಬರಿಯಲ್ಲಿ ಹಲವಾರು ಪಾತ್ರಗಳು ಬಂದುಹೋಗುತ್ತವೆ. ಆದರೆ ಕೆಲವು ಪಾತ್ರಗಳು ನಮ್ಮ ಮನಸ್ಸಿನಲ್ಲಿ ಹಚ್ಚಹಸಿರಾಗಿ ಉಳಿಯುತ್ತವೆ. ಅಂತಹ ಪಾತ್ರಗಳು ಈ ಕಾದಂಬರಿಯಲ್ಲಿ ಹೇರಳವಾಗಿದೆ.

**ಪ್ರಧಾನ ಪಾತ್ರಗಳು**

**ಮಾಧವಿ**

ಮಾಧವಿಯೇ ಈ ಕಾದಂಬರಿಯ ಕೇಂದ್ರ ಬಿಂದು. ಇವಳು ತನ್ನ ಅಸ್ತಿತ್ವಕ್ಕಾಗಿ ಹೋರಾಡಬಯಸಿದರೂ ಸಾಧ್ಯವಾಗದಂತಹ ಪಾತ್ರ. ತನ್ನ ತಾಯಿಯ ತಪ್ಪು ಏನೋ ಇಲ್ಲದಿದ್ದರೂ ಮಹಾರಾಜ ಯಯಾತಿ ಕಾಮದಾಸೆಗೆ ಬಲಿಯಾಗಿ ಹುಟ್ಟಿದ್ದ ಇವಳು ಅವ್ವನೊಂದಿಗೆ ಹಳ್ಳಿಯಲ್ಲಿ ಸುಂದರವಾದ ಬದುಕನ್ನು ಕಟ್ಟಿಕೊಳ್ಳಲು ಪ್ರಯತ್ನಿಸುತ್ತಿರುತ್ತಾಳೆ. ಅದಿಮನನ್ನು ಮನಸ್ಸಿನಲ್ಲಿಯೇ ಪ್ರೀತಿಸಿ ಮದುವೆಯಾಗುವ ಕನಸ್ಸು ಕಂಡ ಇವಳು ರಾಜತ್ವದ, ಪ್ರಭುತ್ವದ ದಬ್ಬಾಳಿಕೆಗೆ ಬಲಿಯಾಗುತ್ತಾಳೆ. ತನ್ನ ತಂದೆಯಾದ ಯಯಾತಿ ತನ್ನ ಪ್ರತಿಷ್ಠೆ, ಸ್ವಾರ್ಥಕ್ಕಾಗಿ ಮಗಳಾದ ಮಾಧವಿಯನ್ನು ಒತ್ತೆಯಿಡುತ್ತಾನೆ. ದಾನಮಾಡುತ್ತಾನೆ. "ಇಲ್ಲ... ಇಲ್ಲ... ನಾನು ನಿಮ್ಮ ಮಗಳಲ್ಲ... ನೀವು ನನ್ನ ತಂದೆಯಲ್ಲ ನನಗೂ ನಿಮಗೂ ಯಾವ ಸಂಬಂಧವೂ ಇಲ್ಲ ದಯಮಾಡಿ ನನ್ನನ್ನು ಇಲ್ಲಿಂದ ಹೋಗಲುಬಿಡಿ" ಎಂದು ಅಂಗಾಲಾಚಿದರು. ಯಯಾತಿ ಗಾಲವರೊಂದಿಗೆ ಕಳುಹಿಸಿಕೊಟ್ಟನು. ತನ್ನ ಗುರುವಿಗಾಗಿ ಕೊಡಬೇಕಾಗಿದ್ದ ಎಂಟು ನೂರು ಕಪ್ಪು ಕಿವಿಯ ಬಿಳಿಯ ಕುದುರೆಗಾಗಿ ಗಾಲವ ಮಾಧವಿಯನ್ನು ಒಂದೊಂದು ವರ್ಷದಂತೆ ಮೂವರು ರಾಜನಿಗೆ ಒತ್ತೆ ಇಟ್ಟನು. ಮೊದಲು ಹರ್ಯಶ್ವ, ದೀವೋದಾಸ, ಉಶೀರ ಬಳಿ ಒತ್ತೆ ಇಟ್ಟು ಒಂದೊಂದು ಗಂಡು ಸಂತಾನ ಪಡೆದುಕೊಂಡು ಅಶ್ವಗಳನ್ನು ಪ್ರತಿಯಾಗಿ ನೀಡಲು ಕೇಳಿಕೊಂಡನು. ಅಂತೆಯೇ ಮೂವರು ರಾಜರಿಂದ ಆರುನೂರು ಕುದುರೆಗಳನ್ನು ಒಂದುಗೂಡಿಸಿದನು. ಇನ್ನೂ ಉಳಿದ ಇನ್ನೂರು ಕುದುರೆಗಳಿಗಾಗಿ ಮಾಧವಿಯನ್ನು ಗುರು ವಿಶ್ವಾಮಿತ್ರರಲ್ಲಿ ಒಂದು ವರ್ಷ ಒತ್ತೆಇಟ್ಟು ತನ್ನ ಗುರುದಕ್ಷಿಣೆಯನ್ನು ನೀಡಿದನು. ಆದರೆ ಮಾಧವಿ ಯಾರೋ ಗುರುವಿನ ಗುರುದಕ್ಷಿಣೆಗಾಗಿ ಒಂದು ಪಶುವಿನಂತೆ ಮಾರಾಟವಾಗುವ ವಸ್ತುವಾಗಿ ಬಿಡುತ್ತಾಳೆ. ಇವಳು ನಾಲ್ಕು ವರ್ಷಗಳಲ್ಲಿ ಅನುಭವಿಸಿದ ನೋವು ಅವಳನ್ನು ಪ್ರಬುದ್ಧಳನ್ನಾಗಿ ಮಾಡಿರುತ್ತದೆ. ಮರಳಿ ಬಂದ ಮಾಧವಿಗಾಗಿ ಸ್ವಯಂವರ ಏರ್ಪಡಿಸಲು ಯೋಚಿಸಿದ ಯಯಾತಿಗೆ ಇದು ನನ್ನ ಕನಸಲ್ಲ. "ನನ್ನ ಸ್ವಾತಂತ್ರ್ಯವನ್ನು ನನಗೆ ಮರಳಿ ಕೊಡಿ" ಎಂದು ಕೇಳಿದ ಮಾತುಗಳಿಂದ ಯಯಾತಿಯನ್ನು ಮೇಲೆ ದೊಡ್ಡ ದಿಗ್ವಿಜಯವನ್ನು ಸಾಧಿಸಿ ಬಿಟ್ಟಿದ್ದಳು.

**ಯಯಾತಿ**

ಯಯಾತಿ ಮಹಾರಾಜನು ತನ್ನ ಸ್ವಾರ್ಥಕ್ಕಾಗಿ, ಕಾಮದಾಟಕ್ಕಾಗಿ ತಮ್ಮ ಮಕ್ಕಳನ್ನು ನರಕಕ್ಕೆ ತಳ್ಳಿದ ವ್ಯಕ್ತಿ. ದೇವಯಾನಿಯ ತಂದಯ ಶಾಪದಿಂದ ಬಂದ ಅಕಾಲದ ವೃದ್ಧಾಪ್ಯವನ್ನು ಪುರುವಿಗೆ ನೀಡಿ ಅವನ ಯೌವನವನ್ನು ತೆಗೆದುಕೊಂಡು ಯಾವುದೇ ಪಶ್ಚಾತಾಪ ಇಲ್ಲದೆ ಸಂತೋಷದಿಂದ ಇದ್ದ ಇವನು ಕಾಮವನ್ನು ಬಯಸಿ ದೇವಯಾನಿ, ಶರ್ಮಿಷ್ಠೆಯರ ಬಳಿ ಹೋದರೆ ಇಬ್ಬರೂ ಏಕಕಾಲಕ್ಕೆ ಇವನನ್ನು ನಿರಾಕರಿಸಿಬಿಟ್ಟರು. ಕಾರಣ ಮಗನ ಯೌವನವಾಗಿತ್ತು. ಅರಮನೆಯ ದಾಸಿಯಾದ ಲಕ್ಷ್ಮಿಯ ಮೇಲೆ ಕುಡಿದ ಅಮಲಿನಲ್ಲಿ ಎರಗಿ ಮಾಡಿದ ತಪ್ಪಿನಿಂದಾಗಿ ಹುಟ್ಟಿದ ಮಗಳ ಮಾಧವಿಯನ್ನು ಯಾವತ್ತೋ ನೋಡದೆ ಇರುವ, ಬೆಳೆಸದೆ ಇರುವ ಮಗಳನ್ನು ತನ್ನ ಗೌರವ ಪ್ರತಿಷ್ಠೆಗಾಗಿ, ಪಶುವಿನಂತೆ ಗಾಲವ ಮುನಿಗೆ ಒತ್ತೆ ಇಡುತ್ತಾನೆ.

“ಎಲ್ಲ ರೀತಿಯಲ್ಲಿಯೂ ಅವಳು ನಿಮ್ಮ ಆಸೆ ಈಡೇರಿಸುವವಳೆ ಅವಳನ್ನು ನಿಮಗೆ ಬೇಕಾದ ಕುದುರೆಗಳಿಗೆ ವಿನಿಮಯ ಮಾಡಿಕೊಳ್ಳಬಹುದು ನಮ್ಮ ವಂಶದ ಹೆಣ್ಣುಮಕ್ಕಳು ಸುಂದರಿಯರು. ಅದರಲ್ಲೂ ಈ ಯಯಾತಿಯ ಮಗಳ ಸೌಂದರ್ಯಕ್ಕೆ ಅವಳ ವಿನಿಮಯಕ್ಕೆ ಈ ಜಗತ್ತಿನಲ್ಲಿ ವಿನಿಮಯವಾಗದೇ ಉಳಿಯುವಂಥದ್ದು ಏನಾದರೂ ಇರಲು ಸಾಧ್ಯವೇ?” ಎಂದು ಅಹಂಕಾರದ ಮದದಿಂದ ಅಹಂ ಮತ್ತು ಗರ್ವವನ್ನು ಮಾಧವಿಯ ಮೇಲೆ ಮೆರೆದಿದ್ದನು. ಯಯಾತಿ ಅಜ್ಞಾನದಿಂದ ಮಾಡಿದ ಕೆಲಸಗಳು ಅವನ ಎರಡು ಮುಖಗಳಾದ ಕಾಮ, ಕ್ರೌರ್ಯಗಳನ್ನು ಪ್ರತಿಬಿಂಬಿಸುತ್ತದೆ.

**ಗಾಲವ ಮುನಿ:**

ಇವನು ವಿಶ್ವಾಮಿತ್ರನ ಶಿಷ್ಯ. ತನ್ನ ಶಿಷ್ಯತ್ವವನ್ನು ಪೂರೈಸಿ ಗುರುದಕ್ಷಿಣೆಯನ್ನು ಕೊಡಬೇಕೆಂಬ ಹುಚ್ಚು ಹಠದಿಂದ. ಅಧಿಕ ಪ್ರಸಂಗವನ್ನು ಪ್ರದರ್ಶಿಸಿಬಿಡುತ್ತಾನೆ. ಗುರುಗಳು ಗುರುದಕ್ಷಿಣೆ ಬೇಡ ಎಂದರೂ ಒತ್ತಾಯಪಡಿಸಿದನು. ವಿಶ್ವಾಮಿತ್ರನು ಗುರುದಕ್ಷಿಣೆಯಾಗಿ ಒಂದು ಕಿವಿ ಕಪ್ಪಾಗಿ ದೇಹವಿಡೀ ಬಿಳಿಯಿಂದ ಕೂಡಿದ ಎಂಟುನೂರು ಕುದುರೆಗಳನ್ನು ಕೇಳಿದನು. ತಮ್ಮ ಕಾಲಮೇಲೆ ತಾವೇ ಕಲ್ಲು ಎಳೆದುಕೊಂಡಂಥವರಾಗಿ ಬಿಟ್ಟ ಗಾಲವ ಅಂತಹ ಕುದುರೆಗಳು ಎಲ್ಲಿ ಸಿಗುತ್ತದೆ. ಅದನ್ನು ಹೇಗೆ ಪಡೆಯುವುದು ಎಂಬುದು ತಿಳಿಯದೆ, ಮಾತಿಗೂ ತಪ್ಪಲಾರದೆ ಆತ್ಮಹತ್ಯೆಯೇ ಕೊನೆಯದಾರಿ ಎಂದು ಯೋಚಿಸಿಬಿಟ್ಟರು. ಇವನ ಗೆಳೆಯ ಗರುಡ ಅವನನ್ನು ತಡೆದು ಯಯಾತಿ ಮಹಾರಾಜರಲ್ಲಿ ಸಹಾಯ ಬೇಡು ಎಂದು ಹೇಳಿದ್ದನು.

ಅದರಂತೆ ಯಯಾತಿ ಬಳಿ ಸಹಾಯ ಬೇಡಿದಾಗ ಕುದುರೆಗಳನ್ನು ಕೊಳ್ಳಲು ಬೇಕಾದ ಹಣ ಕೊಡಲಾಗಲಿಲ್ಲವಾದರಿಂದ ಅದಕ್ಕೆ ಪ್ರತಿಯಾಗಿ ದಾಸಿಯಲ್ಲಿ ಹುಟ್ಟಿದ ತನ್ನ ಮಗಳಾದ ಮಾಧವಿಯನ್ನು ಕೊಡುವುದಾಗಿ ತಿಳಿಸಿದನು. ಅರ್ಥವಾಗದ ಗಾಲವ ಮುನಿಗೆ ಯಯಾತಿ ನನ್ನ ಮಗಳನ್ನು ಉಪಯೋಗಿಸಿಕೊಂಡು ನಿಮಗೆ ಬೇಕಾದ ಕುದುರೆಗಳನ್ನೋ ಅಥವಾ ಕುದುರೆಕೊಳ್ಳಲು ಬೇಕಾದ ಸಂಪತ್ತನ್ನೋ ಅರ್ಜಿಸಿಕೊಳ್ಳುವುದು" ಎಂದು ಹೇಳಿದನು. ಅದರಂತೆ ಗಾಲವ ಮುನಿ ತನ್ನ ಕುದುರೆಗಳಿಗಾಗಿ ಮಾಧವಿಯನ್ನು ಮೂವರು ರಾಜರಲ್ಲಿ ಒತ್ತೆಯಿಟ್ಟು ಆರುನೂರು ಕುದುರೆಗಳನ್ನು ಸಂಗ್ರಹಿಸಿ ಇನ್ನೂ ಉಳಿದ ಕುದುರೆಗಳಿಗಾಗಿ ತನ್ನ ಗುರುವಿಗೆ ಮಾಧವಿಯನ್ನು ಒಪ್ಪಿಸಿದನು. ಮಾಧವಿಯನ್ನು ಒಂದು ಮಾತು ಕೇಳದೆಯೇ ತನ್ನ ಕಾರ್ಯಸಾಧನೆಗಾಗಿ ಸಾಧನ, ಸರಕು, ಉಪಕರಣಗಳಿಗಾಗಿ ಬಳಸಿಕೊಂಡರು. ಓರ್ವ ಮಹಾ ಬ್ರಾಹ್ಮಣ! ಓರ್ವ ಮಹಾಕ್ಷತ್ರೀಯ ಎಂಬ ದೊಡ್ಡ ದೊಡ್ಡ ಪದಗಳನ್ನು ಉಪಯೋಗಿಸಿಕೊಂಡು ಘಾತುಕತನದ ಕ್ರೌರ್ಯಗಳನ್ನು ನಡೆಸಿ ಒಂದು ಹೆಣ್ಣು ಮಗಳ ಜೀವನದ ಜೊತೆಗೆ ಆಟವಾಗಿದ್ದರು.

**ಪೂರಕ ಪಾತ್ರಗಳು**

**ಆದಿಮ:** ಇವನು ಪಾರ್ವತಿಯ ಮಗ ಮಾಧವಿಯ ಸ್ನೇಹಿತ. ಮಾಧವಿ ತನ್ನ ಬಾಲ್ಯದ ದಿನಗಳನ್ನು ಹೆಚ್ಚಾಗಿ ಕಳೆದದ್ದು ಅದಿಮನ ಜೊತೆಯಲ್ಲಿಯೇ ಮಾಧವಿಯನ್ನು ನೋಡಿಕೊಳ್ಳುತ್ತಿದ್ದದ್ದು ಅದಿಮನ ಅವ್ವನೇ. ಒಂದೆರಡು ವರುಷಗಳು ಕಳೆದಿದ್ದವು. ಅದಿಮನ ದೇಹ ಬಾಲಕತನವನ್ನು ಕಳೆದುಕೊಂಡಿದ್ದರು ಗಂಟಲು ಒಡೆದಿತ್ತು. ಚಿಗುರುಮೀಸೆ ಮೂಡಿತ್ತು. ಎದೆ, ತೋಳು ತೊಡೆಗಳಲ್ಲಿ ಮಾಂಸಖಂಡಗಳು ಉಬ್ಬಿ ನಿಲ್ಲತೊಡಗಿದ್ದವು. ಬಾಲ್ಯದಲ್ಲಿ ಮಾಧವಿಯಿಂದ ದೂರ ಇರಲು ಬಯಸುತ್ತಿದ್ದ ಆದಿಮ ಅವಳಿಗೆ ಹತ್ತಿರನಾಗತೊಡಗಿದ ಮಾಧವಿಯ ಉಕ್ಕು-ಬಿಕ್ಕುಗಳನ್ನು ಆದಿಮ ತಿಳಿದುಕೊಳ್ಳಲು ಆರಂಭಿಸಿದನೋ ಮಾಧವಿ ಅವನಿಗೆ ಹತ್ತಿರವಾಗ ತೊಡಗಿದ್ದಳು. ತನ್ನ ಸುಖದುಃಖಗಳನ್ನು ಕೇಳುವ ಓರ್ವ ಗೆಳೆಯನನ್ನಾಗಿ ಅವನನ್ನು ಹಚ್ಚಿಕೊಂಡಿದ್ದಳು. ಆದಿಮ ಮಾಧವಿಯರ ಗೆಳೆತನ ಮತ್ತೊಂದು ಮಜಲನ್ನು ಪಡೆದುಕೊಂಡಿತ್ತು. "ನಿನ್ನ ಹುಡುಗ ಹೇಗಿರಬೇಕು? ಹೇಳು ನೋಡುವಾ? ಅಂತಹ ಹುಡುಗನನ್ನೇ ಹುಡುಕುವಾ?" ಎಂಬ ಆದಿಮನ ಪ್ರಶ್ನೆಗೆ "ನಿಜ ಹೇಳಲಾ? ನನಗೆ ಯಾರ ಜೊತೆಯೂ ಬೇಡವೆನ್ನಿಸುತ್ತದೆ. ಪ್ರೀತಿ, ಹುಡುಗ ಮದುವೆ, ಸಂಬಂಧ ಸಂಸಾರ ಇವೆಲ್ಲವೂ ಸತ್ಯವೆಂದು ನನಗೆ ಅನ್ನಿಸುವುದೇ ಇಲ್ಲ. ಹಾಗಾಗಿ ಕನಸುಗಳೇ ಇಲ್ಲ" ಎಂಬ ಮಾತಿನಿಂದ ಆದಿಮನಿಗೆ ತೀವ್ರ ನಿರಾಸೆಯಾಯಿತು. "ನೀನೇ ನನ್ನ ಆಸೆ, ಕನಸು" ಎಂಬ ಉತ್ತರವನ್ನು ನಿರೀಕ್ಷಿಸುತ್ತಿದ್ದನು. ಆದಿಮ ಅವಳನ್ನು

ತನ್ನದೆಯೊಳಗೆ ಹುದುಗಿಸಿಕೊಂಡವ ಮೆಲ್ಲನೆ ಅವಳ ಮುಖವನ್ನು ಮೇಲೆತ್ತಿ "ನನ್ನ ಹುಡುಗಿ ನೀನೇ ಆಗಬೇಕೂ" ಎಂದು ತನ್ನ ಒರಟು ತುಟಿಗಳನ್ನು ಮಾಧವಿಯ ತುಟಿಯ ಮೇಲೆ ಒತ್ತಿಬಿಟ್ಟಿದ್ದನು. ಇದರಿಂದಾಗಿ ರಾತ್ರಿ ಪೂರ್ತಿ ಇಬ್ಬರೂ ನಿದ್ದೆ ಇಲ್ಲದೆ ಹೊರಳಾಡಿದರು. "ಆದಿ ನನಗೆ ಪ್ರೀತಿ ಬೇಕು. ಬೆಚ್ಚನೆಯ ಪ್ರೀತಿ ಬೇಕು. ಪ್ರೀತಿಯೊಂದೇ ಬೇಕು ಕೊಡುತ್ತೀ ಎಂದು ನಿನ್ನ ಬಳಿ ಬಂದಿದ್ದೇನೆ. ಪ್ರೀತಿಯನ್ನು ಕೊಡುತ್ತೀಯಲ್ಲ. ಜೊತೆ ಹಕ್ಕಿ ಆಗುತ್ತೀಯಲ್ಲ? ಬೆಚ್ಚನೆಯ ಗೂಡು ಕಟ್ಟಿಕೊಡುತ್ತೀಯಲ್ಲ? ಪ್ರೀತಿಯೇ ಇಲ್ಲದೆ ನಾನು ಬಹಳ ದಣಿದಿದ್ದೇನೆ. ಆದಿ, ಆಸೆಗಳಿಲ್ಲದೆ, ಕನಸುಗಳಿಲ್ಲದೆ ಬರಡಾಗಿಬಿಟ್ಟಿದ್ದೇನೆ. ನಿನ್ನ ಪ್ರೀತಿ ನನಗೆ ಆಸೆ, ಕನಸುಗಳನ್ನು ಮೂಡಿಸಬೇಕಿದೆ. ಆ ಪ್ರೀತಿ ಕೊಡುತ್ತೀಯಲ್ಲ" ಎಂಬ ಹೆಣ್ಣಿನ ಆಸೆ ಬಯಕೆಯನ್ನು ಆದಿಮನಲ್ಲಿ ಕೇಳತೊಡಗಿದ್ದಳು. ಆದರೆ ರಾಜನ ಆಜ್ಞೆಯಂತೆ ಅರಮನೆಗೆ ಹೋದ ಮಾಧವಿಯನ್ನು ನೆನೆದು ಭ್ರಾಂತನಂತೆ ಅವಳನ್ನು ಬಳಸಿದ್ದ ತನ್ನ ಕೈಗಳನ್ನು ನೋಡಿಕೊಂಡಿದ್ದ ಮಾಧವಿ ತಲೆ ಇಟ್ಟಿದ್ದ ಎದೆಯನ್ನು ಸವರಿಕೊಂಡಿದ್ದ ಅವಳಾಗಿಯೇ ಬೇಡಬೇಡವೆಂದರೂ ಅವಳ ತುಟಿ ಒತ್ತಿದ್ದ ತನ್ನ ತುಟಿಯನ್ನು ದುಃಖದಿಂದ ಕಚ್ಚಿಕೊಂಡಿದ್ದ. ಮಾಧವಿ ಮತ್ತೆ ಮರಳಿ ಬರುತ್ತಾಳಾ ಎಂಬ ಪ್ರಶ್ನೆಯಲ್ಲಿಯೇ ಮುಳುಗಿದನು. ಕಾದಂಬರಿಯ ಕೊನೆಯಲ್ಲಿ ಇವನ ಪ್ರಶ್ನೆಗೆ ಉತ್ತರವಾಗಿ ಮಾಧವಿ ಬಂದಳು.

**ದಿವೋದಾಸ**

ಬಹಳ ಒಳ್ಳೆಯ ವ್ಯಕ್ತಿ. ಧಾರ್ಮಿಕ ಸ್ವಭಾವದ ಧರ್ಮಬೀರು. ಆದರೆ ಭಗವಂತ ಅವರಿಗೆ ಮಕ್ಕಳ ಭಾಗ್ಯವನ್ನು ಕರುಣಿಸಿಲ್ಲ. ಅದಕ್ಕಾಗಿ ಕೊರಗುತ್ತಿದ್ದಾರೆ. ರಾಜ್ಯ ಉತ್ತರಾಧಿಕಾರಿ ಇಲ್ಲದೆ ಅರಾಜಕತೆ ಕಡೆ ಸಾಗಿ ಬಿಡಬಹುದೆಂಬ ಆತಂಕದಲ್ಲಿದ್ದಾರೆ. ಎರಡನೆಯ ವಿವಾಹದ ಬಗೆಗೆ ಯೋಚಿಸದಷ್ಟೂ ಧರ್ಮಾತ್ಮ ಮಹಾರಾಣಿಯೂ ಹಾಗೆಯೇ ಇದ್ದಾರೆ. ಇವರದು ಹೇಳಿ ಮಾಡಿಸಿದ ಜೋಡಿಯಂತಿದ್ದಾರೆ ಎಂಬ ವಿಷಯವನ್ನು ಗಾಲವರಿಂದ ಮಾಧವಿ ತಿಳಿದಿದ್ದಳು.

ದಿವೋದಾಸ ನಿಜವಾಗಿಯೂ ಉತ್ತಮ ವ್ಯಕ್ತಿಯಾಗಿದ್ದು ವಂಶೋದ್ಧಾರಕನಿಗಾಗಿ ಇವಳನ್ನು ಸೇರಬಯಸುತ್ತಾನೆ. ದಿವೋದಾಸ ಮಹಾರಾಜ ಮಾಧವಿಯೊಂದಿಗೆ ಮಾತನಾಡುತ್ತಾ "ಹೆಣ್ಣು-ಗಂಡಿನ ನಡುವಣ ಸಂಬಂಧ ಕಾಮದ್ದಾಗಿರಬಹುದು, ಪ್ರೇಮದ್ದಾಗಿರಬಹುದು. ಪರಸ್ಪರ ಸಹ್ಯವಾಗಿರಬೇಕೆಂದು ಬಯಸುವವನು ನಾನು. ಪರಸ್ಪರ ಸಾಂಗತ್ಯ ಬೆಳೆದಾಗ ಮಾತ್ರ ಸಹ್ಯವಾದ ಸಾಹಚರ್ಯ, ಸಂಬಂಧಗಳು ಮೂಡಲು ಸಾಧ್ಯ ಎಂದು ನಂಬಿರುವ ನಾನು" ನಮ್ಮ ಸಂಬಂಧ ಸಹ್ಯವಾಗುವವರೆಗೆ ಮುಟ್ಟುವುದಿಲ್ಲ ಎಂದು ಹೇಳಿ ಹೋದನು. ಐದಾರುಬಾರಿ ಮಾಧವಿಯನ್ನು ಭೇಟಿಯಾಗಲು ಬಂದಿದ್ದರೂ

ಹಾಗೆಯೇ ಮರಳಿ ಹೋಗುತ್ತಿದ್ದರು. ಮಹಾರಾಣಿಯ ಚುಚ್ಚುನುಡಿ ಕಾಲದ ಅಭಾವದಿಂದ ದಿವೋದಾಸ ಮಾಧವಿಯ ಮೇಲೆ ಆಕ್ರಮಣ ಮಾಡಿಬಿಟ್ಟನು. ಅದಕ್ಕೆ ಮಾಧವಿಯಲ್ಲಿ ಕ್ಷಮೆಯನ್ನು ಯಾಚಿಸಿದನು. ಕಾಲನಂತರ ಗರ್ಭವತಿಯಾದ ಮಾಧವಿಯನ್ನು ನೋಡಲು ಮಹಾರಾಜ ಬಂದಿರಲೇ ಇಲ್ಲ. ಒಮ್ಮೆ ಮಾಧವಿಯೇ ಅವರನ್ನು ನೋಡುವ ಸಲುವಾಗಿ ಮಹಾರಾಣಿಯ ಅಂತಃಪುರಕ್ಕೆ ಹೋಗಿದ್ದರು. ಮಾಧವಿಯನ್ನು ನೋಡಲು ಮಹಾರಾಣಿ ಹೇಳಿದ ಮೇಲೆ ಅದೇ ರಾತ್ರಿ ಅವಳ ವಾಸ್ತವ್ಯದತ್ತ ಹೋಗಿದ್ದರು. ಆದರೆ ಅವಳು ಮಲಗಿ ನಿದ್ರಿಸುತ್ತಿದ್ದಳು. ಮಾಸಗಳು ಉರುಳಿದಂತೆ ಮಾಧವಿಗೆ ಗಂಡು ಮಗುವಿನ ಜನನವಾಯಿತು. "ನಿಮ್ಮಲ್ಲಿ ಬಹಳ ದೊಡ್ಡದಾದ ಗುಣವಿದೆ. ಮುಖವಾಡವಿಲ್ಲದೆ ಇರುವ ಗುಣ, ಮುಖವೊಂದನ್ನೇ ಇಟ್ಟುಕೊಂಡಿರುವ ಗುಣ. ಮಹಾರಾಣಿಯವರನ್ನೂ ಗೌರವಿಸುವ, ಪ್ರೀತಿಸುವ ಗುಣ. ದಾಸಿಯಲ್ಲಿಯೂ ಸಾಹಚರ್ಯ, ಸಾಂಗತ್ಯ ಬಯಸುವ ಗುಣ. ನಾನೂ ಒಬ್ಬ ಮನುಷ್ಯಳೆಂದು ನೋಡುವ ಮಾನವೀಯ ಗುಣ" ಎಂದು ಹೊಗಳಿ ನಮಸ್ಕರಿಸಿ ಮಗುವನ್ನು ಕೊಟ್ಟು ಮಾಧವಿ ಹೊರಟಳು. ಇಡೀ ಕಾದಂಬರಿಯಲ್ಲಿ ರಾಜರು ಎನಿಸಿಕೊಂಡವರು. ಹೆಣ್ಣಿಗೆ ಅನ್ಯಾಯವನ್ನು ದೌರ್ಜನ್ಯವನ್ನು ನಾಶಮಾಡುತ್ತಾ ಬಂದರೆ ಇಲ್ಲಿ ದಿವೋದಾಸ ಹೆಣ್ಣಿಗೆ ಅವಳ ವ್ಯಕ್ತಿತ್ವವನ್ನು ಗೌರವಿಸುವ ರೀತಿಯನ್ನು ಲೇಖಕಿ ಚಿತ್ರಿಸಿರುವುದು ಸಮಾಜದಲ್ಲಿ ಹೆಣ್ಣನ್ನು ಪ್ರೀತಿಸುವ, ಗೌರವಿಸುವ ಹೆಣ್ಣುಮನಸ್ಸಿನ ಗಂಡಸರು ಇರುತ್ತಾರೆ ಎಂಬುದನ್ನು ತೋರಿಸುತ್ತಿದೆ.

**ಸೇವಂತಿ**

ಸೇವಂತಿ ಉಶೀರರ ಅರಮನೆಯ ದಾಸಿ ಮಾಧವಿ ಬಂದ ಮೇಲೆ ಅವಳ ದಾಸಿಯಾಗಿ ಕಾರ್ಯನಿರ್ವಹಿಸಿದವಳು. ಮಾಧವಿಯ ಸ್ಥಿತಿಗೆ ದೇವಯಾನಿ, ಶರ್ಮಿಷ್ಠೆ, ಹರ್ಯಶ್ವರ ಮಡದಿ, ಅಂಬಿಕಾ, ದೇವೋದಾಸ ಎಲ್ಲರೂ ಮರುಕಪಟ್ಟವರೇ ಆದರೆ ಮಾಧವಿಯನ್ನು ಮಾತು ಮಾತಿಗೂ ನಿಂದಿಸುತ್ತಿದ್ದಳು ಸೇವಂತಿ. "ಅಲ್ಲ ಈ ರಾಜ್ಯದ ಉತ್ತರಾಧಿಕಾರಿಯನ್ನು ಹೆರಲು ತಮ್ಮಂತಹ ಅಲೆಮಾರಿಯೇ ಆಗಬೇಕಿತ್ತಾ ಒಡತಿ?" ಎಂಬ ಮಾತಿನಿಂದ ಮಾಧವಿ ನೊಂದಳು. ಮೊನ್ನೆ ಮೊನ್ನೆಯ ತನಕವೂ ಹಿರಿಯ ದೊರೆ ಅಂತಃಪುರ ಬಿಟ್ಟು ಕದಲುತ್ತಿರಲಿಲ್ಲ. ಆದರೆ ಮಾಧವಿ ಬಂದ ಮೇಲೆ ಇವಳನ್ನು ನೋಡಲು ಆಗಾಗ ಬರುತ್ತಿದ್ದರು. ಸಲುಗೆಯಿಂದ ಮಾತಾನಾಡುತ್ತಿದ್ದುದ್ದನ್ನು ನೋಡಿ "ಯಾವ ಲೋಕದಲ್ಲೂ ಕಂಡಿಲ್ಲ. ಕೇಳಿಲ್ಲ ಕಾಣವ್ವ ಮಗನಿಗೂ ಬಲೆಬೀಸಿದ. ಅಪ್ಪನಿಗೂ ಬಲೆ ಬೀಸಿದ ಮಾಯಾಂಗನೆಯನ್ನು" ಎಂದು ನುಡಿದಿದ್ದಳು. ಮಹಾರಾಣಿಗೆ ಸೇವಂತಿಯ ಮಾತುಕತೆಗಳು ತಿಳಿದು ಮಾಧವಿಯ ಉಳಿಗದಿಂದ ತೆಗೆಯಿಸಲು ಮಾಧವಿಯಲ್ಲಿ ಕೇಳಿದಾಗ

ಬೇಡ ಎಂದೇ ಹೇಳುತ್ತಾಳೆ. ಸೇವಂತಿ ಆಡುವ ಮಾತುಗಳು ನನ್ನ ಬದುಕಿನ ವಾಸ್ತವದ ವ್ಯಾಖ್ಯಾನಗಳು ಎಷ್ಟೋ ಬಾರಿ ಅವಳ ಮಾತುಗಳು ನನ್ನವೇ ಆಗಿರುತ್ತವೆ. ಅವಳ ಭಾವನೆಗಳು ನನ್ನವೇ ಆಗಿರುತ್ತವೆ. ಅವಳಲ್ಲಿ ಇಡಿಯಾಗಿ ನನ್ನ ಪ್ರತಿಬಿಂಬ ಕಾಣುತ್ತದೆ. ಹಾಗಾಗಿ ನನ್ನ ಬಗೆಗಿನ ಅವಳ ಅಸಹನೆ, ಕೋಪ, ತಾಪ, ತುಚ್ಛೀಕರಣ ಇವುಗಳನ್ನೆಲ್ಲಾ ನೋಡುತ್ತಾ ತಣ್ಣನೆ ಕುಳಿತುಬಿಡುತ್ತೇನೆ".

ಮಗುವನ್ನು ಹೆತ್ತುಕೊಟ್ಟು ಹೋಗುವ ಸಂದರ್ಭದಲ್ಲಿ ಅರಮನೆಯ ಎಲ್ಲರೂ ದುಃಖಿಸುತ್ತಿದ್ದರು. ಆದರೆ ಸೇವಂತಿ ಸಂತೋಷಪಡುತ್ತಿದ್ದಳು. "ನಿಜಕ್ಕೂ ಇವಳ ಮಾಟಗಾತಿಯೇ! ರಾಜ್ಯಕ್ಕೆ ಬದುಕಿಗೆ ಬಡಿದುಕೊಂಡಿದ್ದ ಅನಿಷ್ಠ ಆತಂಕ ದೂರಾಗುತ್ತಿದೆಯೆಂದು ಇವರೆಲ್ಲ ಸಂತೋಷಪಡದೆ ದುಃಖಿಸುತ್ತಿದ್ದಾರಲ್ಲ. ಅದೂ ಓರ್ವ ಯಕಶ್ಚಿತ್ ದಾಸಿಗಾಗಿ..." ಎಂದು ಮನಸ್ಸು ಆಲೋಚಿಸುತ್ತಿತ್ತು. "ಹೋಗಿಬರುತ್ತೇನೆ" ಎಂದು ಮಾಧವಿ ನುಡಿದಾಗ "ಅವ್ವ ನಿನ್ನ ಮಾಯಾಜಾಲವನ್ನು ಒಂದು ವರ್ಷ ಅನುಭವಿಸಿಯೇ ಸಾಕಾಗಿದೆ ಮತ್ತೊಮ್ಮೆಯೇನೂ ಬರುವುದು ಬೇಡ. ಹೊರಡವ್ವ ತಾಯಿ" ಎಂದು ಸೇವಂತಿ ಕೈಮುಗಿದು ವಿಚಿತ್ರವಾದ ರೀತಿಯಲ್ಲಿ ಮಾಧವಿಯನ್ನು ಕಳುಹಿಸಿದಳು.

ಇಲ್ಲಿ ಲೇಖಕಿ ಸೇವಂತಿಯ ಪಾತ್ರದ ಮೂಲಕ ಎಲ್ಲಾ ಹೆಂಗಸರೂ ಒಳ್ಳೆಯತನ ಹೊಂದಿರುವುದಿಲ್ಲ. ಬದಲಾಗಿ ಕೇಡು, ದ್ವೇಷವನ್ನು ಸಾಧಿಸುವ ಮಹಿಳೆಯರು ಇದ್ದಾರೆ ಎಂಬುದನ್ನು ತೋರಿಸಿದ್ದಾರೆ.

**ಅಭಿವ್ಯಕ್ತಿ / ಶೈಲಿ**

ವೇದಾರವರ ಕಾದಂಬರಿಗಳಲ್ಲಿ ಅಭಿವ್ಯಕ್ತಿಯ ಶೈಲಿ ಉತ್ತಮವಾಗಿ ಮೂಡಿಬಂದಿವೆ. ಇವರು ತಮ್ಮ ಭಾವನೆಗಳನ್ನು ಪಾತ್ರಗಳ ಮೂಲಕ ಹೇಳಿ ಹೊರಟಿದ್ದಾರೆ. "ಕಪ್ಪು ಕಿವಿಯ ಬಿಳಿಯ ಕುದುರೆಗಳು ಕಾದಂಬರಿಯೂ ಆಡುಭಾಷೆಯಲ್ಲಿ ಮೂಡಿ ಬಂದಿದೆ. ಓದುಗರಿಗೆ ಸರಳವಾಗಿ ಅರ್ಥವಾಗುವಂತಹ ಭಾಷೆಯಲ್ಲಿ ತಮ್ಮ ಕಾದಂಬರಿಯನ್ನು ಸರಳೀಕರಿಸಿ ರಚಿಸಿರುವುದು ಲೇಖಕಿಯ ಕಾವ್ಯ ನಿರ್ಮಾಣದ ಪ್ರತಿಭೆಯನ್ನು ಹೊರಹಾಕುತ್ತದೆ. ಇವರು ಕಾದಂಬರಿಯ ಉದ್ದಕ್ಕೂ ಆಧುನಿಕ ಸಾಹಿತ್ಯದ ಲಕ್ಷಣಗಳಲ್ಲೊಂದಾದ ಗಾದೆಗಳ ಬಳಕೆಯನ್ನು ಕಾಣಬಹುದಾಗಿದೆ.

"ಮಿಂಚಿಹೋಗಿದ್ದಕ್ಕೆ ಚಿಂತಿಸಿ ಫಲವಿಲ್ಲ" ಎಂಬ ಮಾತನ್ನು ಪಾರ್ವತಿಯ ಅವ್ವನ ಮೂಲಕ ಅತ್ಯಾಚಾರಕ್ಕೆ ಒಳಗಾದ ಲಕ್ಷ್ಮಿಗೆ ಸಮಾಧಾನವನ್ನು ಹೇಳಿಸುತ್ತಿದ್ದಾರೆ ಲೇಖಕಿ. ನಡೆದದನ್ನು ನೆನೆದು ಕೊರಗುವುದಕ್ಕಿಂತ ಮುಂದೆ ಮಾಡಬೇಕಾದ ಕೆಲಸವನ್ನು ಮೇಲಿನ ಮಾತು ಎಚ್ಚರಿಸುತ್ತದೆ.

"ಕೊಟ್ಟ ಶಾಪ ಬಿಟ್ಟ ಬಾಣ ಮರಳಿ ಹಿಂತಿರುಗಲಾರವು" ಯಯಾತಿಗೆ ದೇವಯಾನಿಯ ತಂದೆ ಶುಕ್ರಾಚಾರ್ಯ ಕೊಟ್ಟ ಅಕಾಲ ವೃದ್ಧಾಪ್ಯದ ಶಾಪದಿಂದಾಗಿ ನೊಂದುಬೆಂದ ದೇವಯಾನಿ ತಂದೆಯಲ್ಲಿ ಪರಿಹಾರ ಕೇಳಲು ಹೋದಾಗ ಈ ಮಾತುಗಳನ್ನು ಹೇಳಿ ಬೇರೆ ಯಾರಾದರೂ ಯೌವನವನ್ನು ತೆಗೆದುಕೊಳ್ಳಬಹುದಾದರೆ ಮಾತ್ರ ಅವನಿಗೆ ಪುನಃ ಯೌವನ ಪ್ರಾಪ್ತಿಯಾಗುತ್ತದೆ ಎಂದು ಹೇಳಿದನು.

"ನಾಯಿ ಹಸಿದಿತ್ತು, ಹಿಟ್ಟು ಹಳಸಿತ್ತು" ಎಂಬ ಮಾತನ್ನು ಸೇವಂತಿಯೂ ಮಾಧವಿಗೆ ಹೇಳುತ್ತಾಳೆ. ದಾಸಿಯಾದ ಇವಳು ಉಶೀರನ ಅರಮನೆಯಲ್ಲಿ ಇದ್ದು ಮಾಧವಿಯ ಸೇವಕಿಯಾಗಿ ನೇಮಕವಾಗಿದ್ದ ಇವಳು ಮಾಧವಿಯನ್ನು ನಿಂದಿಸುತ್ತಾಳೆ. ಗಂಡು ಸಂತಾನವಿಲ್ಲದ ರಾಜನೂ ತನ್ನ ಬೇಡಿಕೆ ಈಡೇರಿಸಿಕೊಳ್ಳಬೇಕಾದ ಪರಿಸ್ಥಿತಿಯನ್ನು ಮೇಲಿನ ಮಾತಿನ ಮೂಲಕ ನಿಂದಿಸುತ್ತಾಳೆ.

"ಯಾವ ಲೋಕದಲ್ಲೂ ಕಂಡಿಲ್ಲ, ಕೇಳಿಲ್ಲ ಕಾಣವ್ವ ಮಗನಿಗೂ ಬಲೆ ಬೀಸಿದ ಅಪ್ಪನಿಗೂ ಬಲೆ ಬೀಸಿದ ಮಾಯಾಂಗನೆಯನ್ನು", "ಕಾಮಾಲೆ ಕಣ್ಣಿನವರಿಗೆ ಲೋಕವೆಲ್ಲಾ ಹಳದಿಯಂತೆ", "ಬೀದಿಯಲ್ಲಿ ಹೋಗುವ ಮಾರಿಯನ್ನು ಮನೆಗೆ ಕರೆತಂದಂತಾಯ್ತು" ಇತ್ಯಾದಿ ನುಡಿಗಟ್ಟುಗಳು ಕಾದಂಬರಿಯ ಉದ್ದಕ್ಕೂ ಬರುತ್ತವೆ.

## ರಾಜ ಒಡೆಯರ್

### ಕಥಾವಸ್ತು ಮತ್ತು ಸ್ವರೂಪ

ಇದೊಂದು ಐತಿಹಾಸಿಕ ಕಾದಂಬರಿಯಾಗಿದ್ದು, ಮೈಸೂರು ಅರಮನೆಯ ರಾಜವಂಶಸ್ಥನಾದ ರಾಜ ಒಡೆಯರ್ ಚಿತ್ರಣವನ್ನು ಹೊಂದಿರುವ ಕಾದಂಬರಿಯಾಗಿದ್ದು, ಈ ಕಾದಂಬರಿ ರಾಜಕೀಯ ಸ್ಥಿತಿಗತಿಗಳನ್ನು ತಿಳಿಸುವುದಲ್ಲದೆ ಯದುವಂಶದ ಇತಿಹಾಸವನ್ನು ಅನಾವರಣಗೊಳಿಸಿದ್ದಾರೆ. ಈ ಕಾದಂಬರಿಯು ಅಮಾವಾಸ್ಯೆಯ ಕತ್ತಲಿನಿಂದ ಪ್ರಾರಂಭವಾಗುತ್ತದೆ. ಚೋಳ ಚಾಮರಾಜ ಒಡೆಯರ್‌ರ ಮರಣದ ನಂತರ ಅವರ ಹಿರಿಯ ಮಗ ಬೆಟ್ಟದ ಚಾಮರಾಜ ಒಡೆಯರ್ ಸಿಂಹಾಸನವನ್ನು ಏರಲು ನಿರಾಸಕ್ತಿಯನ್ನು ತೋರಿಸಿದರು. ಆದರೂ ಹಿರಿಯರ ಮಾತಿನಂತೆ ಸಿಂಹಾಸನವೇರಿ ರಾಜನಾದರೂ ಸರಿಯಾಗಿ ಆಡಳಿತ ಮಾಡದ ಕಾರಣ ರಾಜ್ಯದ ಪರಿಸ್ಥಿತಿ ಡೋಲಾಯಮಾನವಾಯಿತು. ಇದನ್ನು ಕಂಡ ಸರ್ವ ಹಿರಿಯರು ಸಭೆ ಸೇರಿಸಿದರು. ಹಿರಿಯರ ಸಭೆ ನಿಷ್ಪಕ್ಷಪಾತವಾಗಿ ಸಭೆ ನಡೆಸಿ ನಾಡಿಗಾಗಿ ನಾಡ ಜನರ ನೆಮ್ಮದಿಗಾಗಿ ಮಹಾರಾಜರನ್ನು ಸಿಂಹಾಸನದಿಂದ ಇಳಿಸುವ ಸರ್ವ ಸಮ್ಮತ ನಿರ್ಧಾರಕ್ಕೆ ಬಂದಿತ್ತು. ಆ ನಿರ್ಧಾರವನ್ನು ಕೇಳಿಸಿಕೊಳ್ಳುತ್ತಿದ್ದಂತೆಯೇ

ರಾಜಮಾತೆಯ ಇಡೀ ದೇಹದ ರಕ್ತ ಮುಖಕ್ಕೆ ಬಂದೆರಗಿದಂತೆ ಆಗಿತ್ತು. ಹಿರಿಯರ ಸಭೆಯ ನಿರ್ಧಾರವನ್ನು ಮಹಾರಾಜರು ತಲೆಯಲ್ಲಿ ಆಂತಿದ್ದರು. ತಮ್ಮದಲ್ಲ ಯಾವುದೋ ಒಂದು ಬೃಹತ್ ಭಾರ ಅದು ಹೊರಿಸಿದವರಿಂದಲೇ ಇಳಿಸಲ್ಪಟ್ಟಾಗ ಅವರಿಗೊಂದು ಬಗೆಯ ನೆಮ್ಮದಿಯನ್ನು ತಾಳಿದ್ದರು. ರಾಜಮಾತೆಯವರ ಎರಡನೇ ಸುಪುತ್ರ ರಾಜ ಒಡೆಯರ್ ಸಿಂಹಾಸನದ ಮೇಲೆ ಕೂರಿಸುವ ನಾಡಿನ ಪ್ರಭುವನ್ನಾಗಿ ಮಾಡುವ ನಿರ್ಧಾರವನ್ನು ಪ್ರಕಟಿಸಿತ್ತು. ನಿರ್ಣಯಗಳು ಅಂಗೀಕಾರವಾಗುತ್ತಿದ್ದಂತೆಯೇ ರಾಜ ಒಡೆಯರು ಎದ್ದು ನಿಂತು ಸರ್ವ ಹಿರಿಯರ ಸಭೆ ಈ ರಾಜ್ಯದ ಮುಂದಿನ ಮಹಾರಾಜರಾಗಿ ನನ್ನನ್ನು ಆಯ್ಕೆ ಮಾಡಿರುವುದಕ್ಕೆ ಮೊದಲಿಗೆ ನಾನು ನಿಮ್ಮೆಲ್ಲರಿಗೂ ಕೃತಜ್ಞತಾಪೂರ್ವಕ ವಂದನೆಗಳನ್ನು ಸಲ್ಲಿಸುತ್ತೇನೆ.' ಆದರೆ ಅದನ್ನು ಒಪ್ಪಿಕೊಳ್ಳಲು ನನಗೆ ಸಾಧ್ಯವಾಗುತ್ತಿಲ್ಲ ಎಂಬ ಮಾತು ಬರುತ್ತಿದ್ದಂತೆಯೇ ಇಡೀ ಸಭೆ ನಿಶ್ಯಬ್ಧವಾಗಿತ್ತು. ಆಡಳಿತ ಯಂತ್ರ ಸಂಪೂರ್ಣವಾಗಿ ಕುಸಿದಿದೆ. ಅದರೊಂದಿಗೆ ಆರ್ಥಿಕತೆಯೂ ನೆಲಕಚ್ಚಿದೆ. ಖಜಾನೆ ಬರಿದಾಗಿದೆ, ಆದಾಯವೆಲ್ಲ ಅಧಿಕಾರಿಗಳ ಹಂತದಲ್ಲಿಯೇ ಸೋರಿಹೋಗಿದೆ. ವಿಜಯನಗರದ ಪ್ರತಿನಿಧಿಗೆ ನಾವು ನೀಡಬೇಕಾದ ತೆರದ ಬಾಕಿಯೇ ಐದು ಸಾವಿರ ಚಿನ್ನದ ಪಗೋಡಗಳಷ್ಟು ಆಗಿ ಕುಳಿತಿದೆ. ಖಾಲಿ ಖಜಾನೆಯನ್ನಿಟ್ಟುಕೊಂಡು ಆ ತೆರವನ್ನು ಕೊಡುವ ಪರಿಯೆಂತು.... ರಾಜ ಒಡೆಯರ್ ಅರಸೊತ್ತಿಗೆಯನ್ನು ಏರಲು ತಾವು ಏಕೆ ನಿರಾಕರಿಸುತ್ತಿದ್ದೇನೆ ಎಂಬುದನ್ನು ಹಂತ ಹಂತವಾಗಿ ಸಕಾರಣವನ್ನು ಕೊಡುತ್ತಾ ಹೋಗಿದ್ದರು.

ಎಲ್ಲ ದಿಕ್ಕುಗಳಿಂದಲೂ ರಾಜ ಒಡೆಯರ ಮಾತುಗಳಲ್ಲಿನ ವಾಸ್ತವವನ್ನು ಕುರಿತಂತೆ ಚರ್ಚೆ ನಡೆಸಿದ ಹಿರಿಯರ ಸಭೆ ವಿಜಯನಗರದ ಪ್ರತಿನಿಧಿಗೆ ಕೊಡಬೇಕಾಗಿರುವ ದೊಡ್ಡ ಮೊತ್ತದ ತೆರವನ್ನು ಮೊದಲಿಗೆ ಒಟ್ಟು ಮಾಡುವತ್ತ ಮೊದಲ ಗಮನಹರಿಸಿತ್ತು. ಅಂತೆಯೇ ತೆರವನ್ನು ಸಂಗ್ರಹಸುವ ಕಾರ್ಯ ಯುದ್ಧೋಪಾದಿಯಲ್ಲಿ ಸಾಗಿಬಿಟ್ಟಿತ್ತು. ರಾಣಿ ವಾಸದ ಕಡೆಯಿಂದ ಮೂರು ಸಾವಿರ ಪಗೋಡಗಳು ಸಂಗ್ರಹವಾಗಿದ್ದರೆ ಹಿರಿಯರು ಎರಡು ಸಾವಿರ ಪಗೋಡಗಳನ್ನು ಸಂಗ್ರಹಿಸಿದ್ದರು.

ಅರಮನೆಯ ವಾತಾವರಣವನ್ನು ಸರಿಪಡಿಸಲು ಊಳಿಗದವರನ್ನು ವಿಭಾಗಗಳಾಗಿ ಮಾಡಿ ಅದರ ಉಸ್ತುವಾರಿಯನ್ನು ನೋಡಕೊಳ್ಳಲು ಗೊತ್ತುದಾರ, ಕರಣಿಕರುಗಳನ್ನು ನೇಮಿಸಿ ಊಳಿಗದವರು ಮತ್ತು ಅಧಿಕಾರಿಗಳಿಗೆ ವೇತನ ಹೆಚ್ಚಿಸಿ ಅವರು ನಿಷ್ಠೆಯಿಂದ ಕೆಲಸ ಮಾಡುವಂತೆ ಮಾಡಿದನು.

ಕಾರುಗಳ್ಳ ದಳವಾಯಿ ವೀರರಾಜಯ್ಯ ರಾಜ ಒಡೆಯರ್ ನಂಜನಗೂಡಿನ ನಂಜುಂಡೇಶ್ವರನ ದರ್ಶನಕ್ಕೆ ಪರಿವಾರ ಸಮೇತ ಹೊರಟಿದ್ದಾಗ ದಾರಿಯಲ್ಲಿ ಅವನು ಸಹ

ಪಲ್ಲಕ್ಕಿಯ ಮೇಲೆ ಕುಳಿತು ಬರುತ್ತಿದ್ದನು. ಮಹಾರಾಜರಿಗೆ ದಾರಿ ಬಿಡದೆ ಅಧಿಕ ಪ್ರಸಂಗತನ ಮಾಡಿದರಿಂದ ಭಟನಾಯಕನು ಪಲ್ಲಕ್ಕಿಯಿಂದ ಅವನನ್ನು ತಳ್ಳಿ ಪಲ್ಲಕ್ಕಿಯನ್ನು ಕಿತ್ತುಕೊಂಡು ಹೀಯಾಳಿಸಿ ಓಡುವಂತೆ ಮಾಡಿದನು. ಇದರಿಂದ ಏಟು ತಿಂದ ಹಾವಿನಂತೆ ಸೇಡನ್ನು ತೀರಿಸಿಕೊಳ್ಳಲು ಮುಂದಾಗುತ್ತಾನೆ.

ರಾಜ ಒಡೆಯರ್ ಪ್ರತಿದಿನ ಕೋಟೆಯೊಳಗೆ ಇದ್ದ ಲಕ್ಷ್ಮೀರಮಣ ದೇವಸ್ಥಾನಕ್ಕೆ ಹೋಗಿ ಬರುತ್ತಿದ್ದ ವಿಷಯ ತಿಳಿದ ವೀರಾರಾಜಯ್ಯ ದೇವಸ್ಥಾನದ ಅರ್ಚಕನನ್ನು ಭೇಟಿಯಾಗಿ ಅವನ ಮನವೊಲಿಸಲು ಪ್ರಯತ್ನಿಸಿ ಕೊನೆಗೆ ಅವನನ್ನು ಹೆದರಿಸಿ ತೀರ್ಥದಲ್ಲಿ ವಿಷಹಾಕಿ ಕೊಡುವಂತೆ ಹೇಳಿದನು. ಎಂದಿನಂತೆ ದೇವಾಲಯಕ್ಕೆ ಬಂದ ರಾಜ ಒಡೆಯರ್ ಪಚ್ಚಕರ್ಪೂರ, ಲವಂಗಗಳಿಂದ ಘಮಘಮಿಸುತ್ತಿದ್ದ ತೀರ್ಥವನ್ನು ರಾಜ ಒಡೆಯರ್ ತಮ್ಮ ತುಟಿಗಳ ಬಳಿ ತೆಗೆದುಕೊಂಡು ಒಮ್ಮೆ ಹೀರಿದ್ದರು. ಶ್ರೀನಿವಾಸಯ್ಯ ಏನು ಮಾಡುತ್ತಿದ್ದೇನೆ ಎಂಬ ಅರಿವಿಲ್ಲದೆ ಮುನ್ನುಗ್ಗಿ ಮಹಾರಾಜರ ಕೈಗಳನ್ನು ಹಿಡಿದು ಕೊಡವಿದರು. 'ಬೇಡಿ ನನ್ನೊಡೆಯಾ ತೀರ್ಥವನ್ನು ಕುಡಿದು ಈ ಪಾಪಿಯನ್ನು ನಿತ್ಯನಾರಕಿಯನ್ನಾಗಿಸದಿರಿ' ಎಂದು ಹೇಳಿ ತಂಬಿಗೆಯ ನೀರನ್ನು ತೆಗೆದುಕೊಂಡು ರಾಜರ ಕೈಗಳನ್ನು ತೊಳೆಯಲು ಉದ್ಯುಕ್ತನಾಗಿದ್ದ. ವಿಷಯ ತಿಳಿದ ರಾಜ ಒಡೆಯರ್ ಸರ್ವ ಹಿರಿಯರ ಸಭೆ ಕರೆದು ಚರ್ಚಿಸಿದಾಗ ವೀರಾರಾಜಯ್ಯನನ್ನು ವಧಿಸುವ, ಶ್ರೀನಿವಾಸಯ್ಯನಿಗೆ ಜೀವನ ಪರ್ಯಂತ ಕತ್ತಲಕೋಣೆಯಲ್ಲಿ ಕೊಳೆ ಹಾಕಲು ತೀರ್ಮಾನಿಸಿತು. ಜೀವಕ್ಕೆ ಜೀವ ಎಂಬ ನ್ಯಾಯ ಶಾಸನ ನಮ್ಮದಲ್ಲ ಬದುಕಿರುವವರೆಗೆ ಅವಮಾನ, ಅಗೌರವ ಅನುಭವಿಸುವ ಹಾಗೆ ವೀರಾರಾಜಯ್ಯನ ಕಿವಿ, ಮೂಗನ್ನು ಕೊಯ್ದು ಬಿಟ್ಟು ಬಿಡೋಣ, ಶ್ರೀನಿವಾಸಯ್ಯ ವಿಷಯ ತಿಳಿಸಿದ್ದರಿಂದ ಕನ್ನಂಬಾಡಿಯ ಗೋಪಾಲಕೃಷ್ಣಸ್ವಾಮಿ ದೇವಾಲಯಕ್ಕೆ ವರ್ಗಾವಣೆ ಮಾಡುವ ನಿರ್ಧಾರವನ್ನು ಪ್ರಕಟಿಸಿದರು.

ಶ್ರೀರಂಗ ಪಟ್ಟಣದ ಮಹಾರಾಜ ಶ್ರೀರಂಗರಾಯ ಬೆನ್ನುಫಣೆ ಎಂಬ ಚಿಕಿತ್ಸೆಗೆ ಅಸಾಧ್ಯವಾದ ಕಾಯಿಲೆಯಿಂದ ನರಳುತ್ತಿದ್ದರು. ಇವರಿಗೆ ಅಲಮೇಲಮ್ಮ, ಶ್ರೀರಂಗಮ್ಮ ಎಂಬ ಇಬ್ಬರು ಹೆಂಡತಿಯರು ಇದ್ದರು. ಆದರೂ ಇವರಿಗೆ ಮಕ್ಕಳಿರಲಿಲ್ಲ. ಆದಕಾರಣ ಮತ್ತು ದಿನೇ ದಿನೇ ಆರೋಗ್ಯ ಕ್ಷೀಣಿಸುತ್ತಿರುವುದರಿಂದ ಶ್ರೀರಂಗಪಟ್ಟಣವನ್ನು ಸುವರ್ಣ ಸಿಂಹಾಸವನ್ನು ರಾಜ ಒಡೆಯರಿಗೆ ನೀಡಬೇಕೆಂಬ ಆಶಯದಿಂದ ಸಭೆ ಸೇರಿಸಿ ಎಲ್ಲರ ಒಪ್ಪಿಗೆಯನ್ನು ಕೂಡ ಪಡೆದರು. ನಂತರ ರಾಜ ಒಡೆಯರಿಗೆ ರಾಯಸವನ್ನು ಬರೆದು ಕಳುಹಿಸಿದರು.

ಮೈಸೂರಿನ ಅರಮನೆಯಲ್ಲಿ ಸರ್ವ ಹಿರಿಯರ ಸಭೆ ಸೇರಿತ್ತು. ಅಲ್ಲಿ ಮುಖ್ಯವಾಗಿ ಚರ್ಚಿತವಾದ ವಿಷಯ ಶ್ರೀರಂಗರಾಯರು ಬರೆದು ಕಳುಹಿಸಿದ್ದ ರಾಯಸವಾಗಿತ್ತು. "ಶ್ರೀರಂಗಪಟ್ಟಣವನ್ನೂ ಶ್ರೀರಂಗರಾಯರಿಂದ ಹಾಗೆಯೇ ಪಡೆದುಕೊಂಡರೆ ಅದು ದಾನವಾಗುತ್ತದೆ. ಯುದ್ಧ ಮಾಡಿ ಗೆದ್ದರೆ ಧೈರ್ಯಪರಾಕ್ರಮಗಳಿಗೆ ದಕ್ಕಿದ ಗೆಲುವಿನ ಸನ್ಮಾನವಾಗುತ್ತದೆ. ಮಹಾರಾಜ ಯಾರಿಂದಲೋ ಪ್ರಾಂತ್ಯವೊಂದನ್ನು ದಾನ ಪಡೆದರೆಂಬ ಅಪಖ್ಯಾತಿ ಇತಿಹಾಸದಲ್ಲಿ ದಾಖಲಾಗುವುದು ಸರ್ವಥಾ ಒಪ್ಪತಕ್ಕ ಮಾತುಗಳಲ್ಲ" ಎಂಬ ನಾರಣಪ್ಪನ ಮಾತಿಗೆ ಸರ್ವಹಿರಿಯರ ಒಪ್ಪಿಗೆ ದೊರೆಯಿತು. ದ್ವಂದ್ವದಲ್ಲೇ ಮುಳುಗಿದ ಮಹಾರಾಜರು ಮಿತ ಪರಿವಾರದೊಂದಿಗೆ ಶ್ರೀರಂಗಪಟ್ಟಣಕ್ಕೆ ಆಗಮಿಸಿ ಅಲ್ಲಿನ ಸ್ಥಿತಿ ನೋಡಿ ಎರಡು ರಾಜ್ಯಗಳ ಒಳಿತಿನ ಉದ್ದೇಶದಿಂದ ಶ್ರೀರಂಗಪಟ್ಟಣವನ್ನು ಮೈಸೂರು ರಾಜ್ಯಕ್ಕೆ ಸೇರಿಸಿಕೊಳ್ಳಲು ಒಪ್ಪಿಗೆ ನೀಡಿದರು.

ಶ್ರೀರಂಗಪಟ್ಟಣವನ್ನು ಮೈಸೂರರಸರಿಗೆ ವಹಿಸಿಕೊಡುವ ಎಲ್ಲ ವಿಧಿ ವಿಧಾನಗಳೂ ಪ್ರಾರಂಭವಾಗಿ ರಾಜ ಒಡೆಯರಿಗೆ ಶ್ರೀರಂಗಪಟ್ಟಣವನ್ನು ಒಪ್ಪಿಸಿ ಮಿತಪರಿವಾರದೊಡನೆ ತಲಕಾಡಿನ ಮಾಲಂಗಿಯತ್ತ ಹೊರಟರು. ಅಲಮೇಲಮ್ಮನವರ ಮನಸ್ಸು ಬಂಡೆಯಂತೆ ಜಡವಾಗತೊಡಗಿತ್ತು. ಕೆಲದಿನಗಳು ಕಳೆದ ನಂತರದಲ್ಲಿ ಶ್ರೀರಂಗರಾಯರು ಮಡಿದರೆಂಬ ಸುದ್ದಿ ಬಂದಿತ್ತು. ಶ್ರೀರಂಗರಾಯರು ಮಡಿದ ನಂತರ ರಾಜ ಒಡೆಯರ್ ಶ್ರೀರಂಗಪಟ್ಟಣದ ಸಿಂಹಾಸನವೇರಿದರು. ರಾಜಧಾನಿ ಶ್ರೀರಂಗಪಟ್ಟಣಕ್ಕೆ ಸ್ಥಳಾಂತರಗೊಂಡು ರಾಜಪರಿವಾರ ಶ್ರೀರಂಗಪಟ್ಟಣಕ್ಕೆ ಆಗಮಿಸಿತ್ತು. ಸಿಂಹಾಸನರೋಹಣದ ನಂತರ ಶ್ರೀರಂಗಪಟ್ಟಣ ಸಹಜ ಸ್ಥಿತಿಯಲ್ಲಿ ನಡೆದುಕೊಂಡು ಹೋಗುತ್ತಿತ್ತು.

ರಂಗನಾಥಸ್ವಾಮಿಯ ಶುಕ್ರವಾರದ ಕೈಂಕರ್ಯದಲ್ಲಿ ತೊಡಗಿದ್ದ ರಾಮಭಟ್ಟರ ಬಳಿಗೆ ರಂಗನಾಯಕಿ ಅಮ್ಮನವರಿಗೆ ಅಲಂಕಾರ ಮಾಡುತ್ತಿದ್ದ ಅರ್ಚಕರು ಬಂದಿದ್ದರು. ಬೊಕ್ಕಸದಿಂದ ಅಮ್ಮನವರ ಅಲಂಕಾರಕ್ಕೆ ಆಭರಣಗಳನ್ನು ತರಿಸಿಕೊಳ್ಳಲು ಏರ್ಪಾಡು ಮಾಡುವುದಾಗಿ ಹೇಳಿದರು. ಅದರಂತೆ ಅರಮನೆಯ ಕಾರುಬಾರುಗಳನ್ನು ನೋಡಿಕೊಳ್ಳುತ್ತಿದ್ದ ಅನಂತಯ್ಯನವರಿಗೆ ವಿಷಯ ತಿಳಿಸಲಾಯಿತು. ಇವರು ರಾಜ ಒಡೆಯರ್‌ಗೆ ಸುದ್ದಿಯನ್ನು ತಲುಪಿಸಿದ್ದರು.

ಬೊಕ್ಕಸದಲ್ಲಿ ಆಭರಣಗಳು ಇಲ್ಲವೆಂದು ಅದು ಮಹಾರಾಣಿ ಅಲಮೇಲಮ್ಮನವರ ಬಳಿಯಲ್ಲಿಯೇ ಇರುತ್ತಿತ್ತು. ಪ್ರತಿ ಶುಕ್ರವಾರ, ಮಂಗಳವಾರ ಪಡೆದು ಅವರಿಗೆ ಹಿಂತಿರುಗಿಸುತ್ತಿದ್ದೆವು. ಎಂದು ಅಧಿಕಾರಿ ಮಹಾರಾಜರಿಗೆ ತಿಳಿಸಿದನು. ರಾಯಸ ಕೊಟ್ಟು ಕಳುಹಿಸಿದರೆ ಖಚಿತಪಡಿಸಿಕೊಂಡು ಬರುವುದಾಗಿ ಅಧಿಕಾರಿಗಳು ನುಡಿದರು. ಇದರಿಂದಾಗಿ

ತೀವ್ರ ಕಳವಳಕ್ಕೆ ಒಳಗಾದ ಮಹಾರಾಜರನ್ನು ವೀರಾಜಮ್ಮಣ್ಣಿಯವರು ಸಂತೈಸಿ ಅಲಮೇಲಮ್ಮ ಉದ್ದೇಶಪೂರ್ವಕವಾಗಿಯೇ ಆಭರಣಗಳನ್ನು ಕೊಡಲು ನಿರಾಕರಿಸುತ್ತಾರೆ. ಅನಂತರ ಬೇಕಾದರೆ ಅಮ್ಮನವರಿಗೆ ಹೊಸ ಚಿನ್ನಾಭರಣಗಳನ್ನು ಮಾಡಿಸಿದರೆ ಆಗುತ್ತದೆ ಎಂದು ಸಮಾಧಾನಿಸಿದಳು. ಇವರ ಮಾತು ಕೇಳಿ ಸಮಾಧಾನಗೊಂಡ ರಾಜ ಒಡೆಯರ್ ರಾಯಸದೊಂದಿಗೆ ಬೊಕ್ಕಸದ ಅಧಿಕಾರಿ ನಾಲ್ಕು ಜನ ಭಟ್ಟರನ್ನು ಕಳುಹಿಸಿದರು.

ಅಲಮೇಲನಮ್ಮ ಬೇಸರದ ಮುಖಭಾವಮಾಡಿಕೊಂಡೇ ರಂಗಯ್ಯನವರನ್ನು ಬರಮಾಡಿಕೊಂಡಿದ್ದರು. ರಂಗಯ್ಯ ಸೊಂಟಪಟ್ಟಿಯಿಂದ ರಾಯಸವನ್ನು ತೆಗೆದು ಮೈಬಾಗಿ ಅಲಮೇಲಮ್ಮನ ಮುಂದೆ ಹಿಡಿದಿದ್ದರು. "ಓ ರಾಜಕಾರ್ಯ ನಿಮಿತ್ತದ ಆಗಮನವೇ ಇದು. ರಾಯಸದಲ್ಲಿನ ವಿಚಾರವೇನು?" ನುಡಿಯುತ್ತಾ ಅಲಮೇಲಮ್ಮನವರು ರಾಯಸವನ್ನು ಓದಿದ ನಂತರ ಶಾಂತವಾಗಿದ್ದ ಸಾಗರದಲ್ಲಿ ಭೂಕಂಪನ ಉಂಟಾದಂತೆ ಕೋಪಗೊಂಡು "ಇದೊಂದು ಬೇರೆ ಬಾಕಿ ಇತ್ತೋ ನಿಮ್ಮ ಮಹಾರಾಜರಿಗೆ ನಾವು ತೀರಿಸಬೇಕಾದ ಸಾಲದಲ್ಲಿ ನಮ್ಮ ಮಹಾರಾಜರು ಮಡಿದ ಮೇಲೂ ನಿಮ್ಮ ಮಹಾರಾಜರ ಋಣ ತೀರಿಲ್ಲವೆ? ಇದೆಂತಹ ಕಲಿಗಾಲ ರಂಗಯ್ಯನವರೆ ರಾಜ್ಯ, ಸಿಂಹಾಸನ, ಸಕಲವಸ್ತು, ಕೋಶಗಳನ್ನು ಬಿಟ್ಟು ಬಂದಿದ್ದರೂ ಸಮಾಧಾನವಾಗಿಲ್ಲವೇ ನಿಮ್ಮ ಮೈಸೂರು ಅರಸರಿಗೆ ಮನುಷ್ಯ ಆಸೆ ತಂದನೇ ಹೊರತು ಆಯಸ್ಸನ್ನು ತರಲಿಲ್ಲವಲ್ಲ" ಆಲಮೇಲಮ್ಮನವರ ಆಕ್ರೋಶ, ಆರೋಪಗಳು ರಂಗಯ್ಯನವರಿಗೆ ಹೊಸದಾಗಿದ್ದವು.

"ಕ್ಷಮಿಸಿ, ಕ್ಷಮಿಸಿ... ಮಹಾರಾಣಿ ಇದರಲ್ಲಿ ಮಹಾಪ್ರಭುಗಳ ಪಾತ್ರವೇನೂ ಇಲ್ಲ. ಈ ಕುರಿತಾದ ಮಾತುಕತೆ ನಡೆದಾಗ ನಿಮ್ಮ ಬಳಿ ಬರುವುದನ್ನು ಖಡಾಖಂಡಿತವಾಗಿ ನಿರಾಕರಿಸಿದ್ದರು ನಾವೇ ಗೊಂದಲದ ನಡುವೆ ಮರೆತಿರಬಹುದೆಂದು. ಹೋಗಿ ಬರುತ್ತೇವೆಂದು ನಿರ್ಧರಿಸಿದ್ದು. ಹೀಗೆ ಮಾತು ಮುಂದುವರೆದು ಅಲಮೇಲಮ್ಮ ಅರಚಿದಂತೆ ನುಡಿದಾಗ ಶ್ರೀರಂಗಮ್ಮ ಒಳಗಿನಿಂದ ಒಂದು ಅಕ್ಕನವರು ಇತ್ತೀಚಿನ ದಿನಗಳಲ್ಲಿ ಸಂಭವಿಸಿದ, ಪತಿವಿಯೋಗ, ರಾಜ್ಯವಿಯೋಗಗಳಿಂದ ಖಿನ್ನರಾಗಿದ್ದಾರೆ ಎಂದು ಹೇಳಿ ಮುಗಿಸುವಷ್ಟರಲ್ಲಿ. ಒಳಕೋಣೆಯಿಂದ ಬಂದ ಅಲಮೇಲಮ್ಮ ರಾಜ ಒಡೆಯರ್‌ನನ್ನು ಹಳಿಯುತ್ತಾರೆ. ಅಮ್ಮನವರ ಆಭರಣಗಳು ನಿಮ್ಮ ಮಹಾಪ್ರಭುಗಳಿಗೆ ಬೇಕೋ? ಅದು ಹೇಗೆ ಅದನ್ನು ಕೊಂಡೊಯ್ಯುವಿರಿ ಬನ್ನಿ ನೋಡೋಣ" ಎಂದು ಆಭರಣ ತುಂಬಿದ ಮಡಿಲನ್ನು ಮುಂದೆ ಮಾಡಿದ್ದರು. ಮುಂದೆ ಬಂದ ಶ್ರೀರಂಗಮ್ಮನನ್ನು ದೂಡಿ ಅಲಮೇಲಮ್ಮನವರು ಮನೆಯಿಂದ ಹೊರ ಬಂದು ಬಿರುಗಾಳಿಯಂತೆ ಓಡತೊಡಗಿದರು. ಅವರ ಹಿಂದೆಯೇ ಶ್ರೀರಂಗಮ್ಮ, ರಂಗಯ್ಯ, ಅವರ ಹಿಂದೆ ಭಟರು ಒಬ್ಬರನ್ನೊಬ್ಬರು ಅಟ್ಟಿಸಿಕೊಂಡು ಓಡತೊಡಗಿದ್ದರು.

ಅಲಮೇಲಮ್ಮನವರ ಓಟ ಕಾವೇರಿ ನದಿ ಎದುರಾಗಲು ನಿಂತಿಬಿಟ್ಟಿತ್ತು. "ಅಕ್ಕಾ ನಿಲ್ಲಿರಿ ನಿಲ್ಲಿರಿ..." ಎಂಬ ಶ್ರೀರಂಗಮ್ಮನ ಕೂಗಾಗಲಿ, "ತಾಯಿ... ತಾಯಿ ದುಡುಕಬೇಡಿ..." ಎಂಬ ರಂಗಯ್ಯನ ಮಾತಾಗಲಿ ಅವರ ಕಿವಿಗೆ ಬಿದ್ದಿರಲಿಲ್ಲ.

"ನಿಮ್ಮ ಮೈಸೂರರಸರ ವಂಶ ನಿರ್ವಂಶವಾಗಲಿ ರಾಜ್ಯಗಳು ಅಳಿಯುತ್ತವೆ. ರಾಜ್ಯಗಳು ಉದಯಿಸುತ್ತವೆ. ಆದರೆ ಒಂದು ಹೆಣ್ಣಿನ ಕಣ್ಣೀರಿನ ಕಥೆ ಯುಗಯುಗಾಂತರಗಳಿಗೂ ಕಾಡುವ ವ್ಯಥೆಗಳಾಗುತ್ತವೆ. ನನ್ನ ನೋವು ನಿಮ್ಮ ಮೈಸೂರರಸರನ್ನು ಕಾಡದೇ ಹೋಗುವುದಿಲ್ಲ. ಸತ್ತ ನಂತರವೂ ನಾನವರನ್ನು ಕಾಡುವವಳೆ... ಇದಕ್ಕೆ ಕಾವೇರಿ ಮಾತೆಯೇ ಸಾಕ್ಷಿ" ಏನು ನಡೆಯುತ್ತಿದೆಯೆಂಬುದು ಅವರ ಅರಿವಿಗೆ ಬರುವಷ್ಟರಲ್ಲಿ ಅಲಮೇಲಮ್ಮನವರು ಕಾವೇರಿಯಲ್ಲಿ ಮುಳುಗಿಹೋಗಿದ್ದರು.

ರಾಜ ಒಡೆಯರಿಗೆ ಇದು ಒಂದು ನುಂಗಲಾರದ ತುತ್ತಾಗಿತ್ತು. ಎಷ್ಟು ಕಾವೇರಿನದಿಗಳಿಂದ ತೊಳೆದರೂ ಅಳಿಯಲಾಗದ ಕಳಂಕವೊಂದು ಮೈಸೂರರಸರಿಗೆ ಅಂಟಿಕೊಂಡು ಬಿಟ್ಟಿತು. ಇದರಿಂದಾಗಿ ಬಹಳವೇ ಕುಗ್ಗಿಹೋದರು. ಮಹಾರಾಜರು ದಿನಗಳು ಉರುಳಿದಂತೆ ರಾಜ ಒಡೆಯರಿಗೆ ಹೆಗಲ ಭಾರ ಅತಿಯಾಗುತ್ತಲೇ ಹೋಗಿತ್ತು. ದಣಿದ ದೇಹ ಶಯ್ಯೆಯ ಮೇಲೊರಗಿ ನಿದ್ದೆಮಾಡಲು ಬಯಸುತ್ತಿತ್ತು. ನಿದ್ದೆಗಿಳಿದ ಅರೆಘಳಿಗೆಯಲ್ಲಿ ಭಯಂಕರವಾದ ಸ್ವಪ್ನವೊಂದು ಬೀಳಲಾರಂಭಿಸುತ್ತಿತ್ತು. ಭೋರ್ಗರೆಯುವ ಕಾವೇರಿ ನದಿಯಲ್ಲಿ ಕೈಗಳೆರಡನ್ನೂ ಮೇಲೆತ್ತಿ ಆರ್ತವಾಗಿ ಕೊಡುತ್ತಿರುವ ಹೆಣ್ಣುಮಗಳು. ರಾಜ ಒಡೆಯರ ನಿದ್ದೆ ಅಲ್ಲಿಗೆ ಮುಗಿಯುತ್ತಿತ್ತು.

ಮಾಲಂಗಿಯಲ್ಲಿದ್ದ ಗುಪ್ತಚರರು ಹೊಸ ಸುದ್ದಿಯೊಂದನ್ನು ತಂದಿದ್ದರು. "ಮಹಾರಾಣಿ ಅಲಮೇಲಮ್ಮನವರ ಅತೃಪ್ತ ಆತ್ಮ ಮಾಲಂಗಿಯ ಸುತ್ತಮುತ್ತ ಕಾಣಿಸಿಕೊಳ್ಳುತ್ತಿದೆಯಂತೆ. ಕಾವೇರಿ ನದಿ ತೀರದಿಂದ ಅಲಮೇಲಮ್ಮನವರ ಶೋಕ ಅಲೆಅಲೆಯಾಗಿ ಮಾಲಂಗಿಯನ್ನು ರಾತ್ರಿಯಿಡೀ ಆವರಿಸಿಕೊಳ್ಳುತ್ತಿದೆಯಂತೆ. ಕಿರಿಯ ರಾಣಿ ಶ್ರೀರಂಗಮ್ಮನವರು ಕಾವೇರಿ ತೀರದಲ್ಲಿ ಈ ಸಂಬಂಧವಾಗಿ ಪೂಜೆಯನ್ನು ನಡೆಸಿದರಂತೆ. ಆದರೆ ಯಾವ ಪ್ರಯೋಜನವೂ ಆಗಿಲ್ಲವಂತೆ. ರಾಜ ಒಡೆಯರ ಮನಸ್ಸು ಮತ್ತಷ್ಟು ಅಸ್ವಸ್ಥತೆಗೆ ಜಾರಿತ್ತು.

ಅರಮನೆಯ ಹಜಾರದಲ್ಲಿ ದೋಷನಿವಾರಣಾ ಪೂಜಾ ಕೈಂಕರ್ಯಗಳು ಆರಂಭಗೊಂಡಿದ್ದವು. ಮಹಾರಾಣಿ ಅಲಮೇಲಮ್ಮನವರ ಚಿನ್ನದ ಪ್ರತಿಮೆಯನ್ನು ಮಾಡಿಸಿ ಅದನ್ನು ಸಕಲಾಭರಣಗಳಿಂದ ಅಲಂಕರಿಸಿ ಪ್ರತಿಷ್ಠಾಪಿಸಲಾಗಿತ್ತು. ಒಡೆಯರ್ ಸ್ವರ್ಣ ಪ್ರತಿಮೆಗೆ ಸಾಷ್ಟಾಂಗ ನಮಸ್ಕಾರ ಮಾಡಿದ್ದರು. ಅರಿಯದೇ ಆದ ಅಪರಾಧವನ್ನು ಮನ್ನಿಸಿ

ಶಾಂತವಾಗಿ ಭಗವಂತನ ಪಾದಕಮಲಗಳನ್ನು ಸೇರಿಕೊಳ್ಳಿರಿ. ಇಲ್ಲಿಂದಾಚೆಗೆ ಯದುಕುಲದ ಮೈಸೂರರಸರು ನಿಮ್ಮನ್ನು ನಿತ್ಯವೂ ಪೂಜಿಸುತ್ತಾರೆ. ನಿಮ್ಮನ್ನು ದೇವಿ ಸ್ಥಾನದಲ್ಲಿರಿಸಿ ತಮ್ಮ ಭಕ್ತಿಗೌರವಗಳನ್ನು ಅರ್ಪಿಸುತ್ತಾರೆ. ಅವರನ್ನು ಹರಸಿರಿ, ಆಶೀರ್ವಾದಿಸಿರಿ ಎಂದು ಪ್ರಾರ್ಥನೆ ಮಾಡಿದರು ರಾಜ ಒಡೆಯರ್.

ವಿಜಯನಗರದ ಅರಸರು ಹಂಪೆಯ ಮಹಾನವಮಿ ದಿಬ್ಬದಲ್ಲಿ ಆಚರಿಸುತ್ತಿದ್ದ ನವರಾತ್ರಿಯನ್ನು ಮಾದರಿಯಾಗಿಟ್ಟುಕೊಂಡು ಸಂಪ್ರದಾಯಬದ್ಧವಾಗಿಯೇ ಶ್ರೀರಂಗಪಟ್ಟಣದಲ್ಲಿಯೂ ನವರಾತ್ರಿ ಆಚರಣೆಯ ಪರಂಪರೆಯನ್ನು ಆರಂಭಿಸಲು ಸರ್ವರೂ ಸಂತಸದಿಂದ ಸನ್ನದ್ಧರಾಗಿದ್ದರು. ಅದೇ ಸಮಯದಲ್ಲಿ ಯುವರಾಜ ನರಸರಾಜ ಒಡೆಯರ ಮರಣವಾರ್ತೆ ಸಿಡಿಲಿನಂತೆ ಪಟ್ಟಣಕ್ಕೆ ಒಂದು ಎರಗಿತ್ತು ಮಗನ ಅಕಾಲ ಮರಣ ಅವರ ಶಕ್ತಿಯನ್ನು ಸೋರುವಂತೆ ಮಾಡಿತ್ತು.

ವಯೋ ಸಹಜವಾದ ನಿತ್ರಾಣದಿಂದಾಗಿ ಮಗನ ಮರಣದಿಂದ ಕೊರಗಿದ ಒಡೆಯರ್ ತನ್ನ ಅಣ್ಣನ ಮಗ ಬೆಟ್ಟದ ಅರಸನನ್ನು ದಳವಾಯಿಯಾಗಿ ನೇಮಕ ಮಾಡಿದ್ದರು. ರಾಜ ಒಡೆಯರ್ ಅಪೂರ್ವ ಸಮಾಧಾನವನ್ನು ಹೊಂದಿ ತಾನು ಇಹಕ್ಕೆ ಬಂದ ಕಾರ್ಯ ಯಶಸ್ವಿಯಾಯಿತೆಂಬ ಸಂತೋಷದಲ್ಲೇ ಶಾಲಿವಾಹನ ಶಕ ೧೫೪೦ ಪೈಂಗಳ ಸಂವತ್ಸರದ ಜ್ಯೇಷ್ಠ ಬಹುಳ ೧೩ರಂದು ಸ್ವರ್ಗಸ್ಥರಾದರು. ಇದರೊಂದಿಗೆ ಈ ರಾಜ ಒಡೆಯರ್ ಕಾದಂಬರಿಯೂ ಮುಕ್ತಾಯವಾಗುತ್ತದೆ.

**ಸನ್ನಿವೇಶ ನಿರ್ವಹಣೆ**

ರಾಜ ಒಡೆಯರ್ ಕಾದಂಬರಿಗೂ ಐತಿಹಾಸಿಕ ಕಾದಂಬರಿಯಾಗಿದ್ದು ಮೈಸೂರು ರಾಜವಂಶದ ಕಥೆಯಾಗಿದೆ. ಈ ಕಾದಂಬರಿಯೂ ತುಂಬಾ ಸೊಗಸಾಗಿದೆ. ಮೈಸೂರು ಅರಸರಿಗೆ ಚ್ಯುತಿ ಬಾರದಂತೆ ಜಾಗೃತಿ ವಹಿಸಿ ಬರೆದ ಕಾದಂಬರಿಯಾಗಿದೆ.

**ಅ) ರಾಜ ಒಡೆಯರ್‌ಗೆ ಸಿಂಹಾಸನ ದೊರೆತದ್ದು**

ಚೋಳ ಚಾಮರಾಜ ಒಡೆಯರ್ ಮತ್ತು ವೀರಾಜಮ್ಮಣ್ಣಿ ಅವರ ಮೊದಲ ಮಗನಾದ ಚಾಮರಾಜ ಒಡೆಯರ್‌ಗೆ ಪಟ್ಟ ಕಟ್ಟಲಾಯಿತು. ಇದು ಚಾಮರಾಜ ಒಡೆಯರ್‌ಗೆ ಇಷ್ಟವಿರಲಿಲ್ಲ. ಆದರೂ ಹಿರಿಯರ ಸಭೆಯ ಒತ್ತಾಯಕ್ಕೆ ಮಣಿದು ಒಪ್ಪಿದರು. ಆದರೂ ಆಡಳಿತವನ್ನು ಉತ್ತಮ ರೀತಿಯಲ್ಲಿ ನಿರ್ವಹಿಸುವಲ್ಲಿ ವಿಫಲವಾಗಿ ಸರ್ವ ಹಿರಿಯರ ಸಭೆ ಸೇರಿ ಇವರನ್ನು ರಾಜನ ಸ್ಥಾನದಿಂದ ವಿಮುಕ್ತಗೊಳಿಸಿದರು. ಆ ಸ್ಥಾನಕ್ಕೆ ಚಾಮರಾಜ ಒಡೆಯರ್ ತಮ್ಮ ಬೋಳ ಚಾಮರಾಜ ಒಡೆಯರ್ ಮತ್ತು ವೀರಾಜಮ್ಮಣ್ಣಿಯವರ ಎರಡನೆ

ಮಗನಾದ ರಾಜ ಒಡೆಯರ್‌ಗೆ ಪಟ್ಟ ಕಟ್ಟಲು ನಿರ್ಧರಿಸಲಾಯಿತು. ಆದರೆ ರಾಜ ಒಡೆಯರ್ ಕೂಡ ಇದನ್ನು ನಿರಾಕರಿಸಿದರು. ತಾವು ನಿರಾಕರಿಸುತ್ತಿರುವುದಕ್ಕೆ ಕಾರಣಗಳನ್ನು ನೀಡುತ್ತಾ ಹೋದರು. ವಿಜಯನಗರದ ಪ್ರತಿನಿಧಿಗೆ ಕೊಡಬೇಕಾದ ತೆರದ ಬಾಕಿಯೇ ಐದು ಸಾವಿರ ಚಿನ್ನದ ಪಗೋಡಗಳಷ್ಟು ಇದ್ದು ಖಾಲಿಯಾದ ಖಜಾನೆಯಿಂದ ಕೊಡುವುದು ಹೇಗೆ, ದಿನನಿತ್ಯದ ಖರ್ಚುವೆಚ್ಚಗಳನ್ನು ಸರಿದೂಗಿಸುವುದು ಹೇಗೆ, ಅಲ್ಲದೆ ಕುಸಿದ ಆಡಳಿತ ವ್ಯವಸ್ಥೆಯನ್ನು ಸರಿಪಡಿಸುವುದು ಇತ್ಯಾದಿ ಕಾರಣಗಳನ್ನು ನೀಡಿದವನು ಎಲ್ಲವನ್ನು ಸರಿದೂಗಿಸಬಹುದು. ಆದರೆ ವಿಜಯನಗರ ಅರಸರಿಗೆ ನೀಡಬೇಕಾದ ದೊಡ್ಡ ಮೊತ್ತವನ್ನು ಕೊಡುವುದು ಕಷ್ಟ ಎಂದಾಗ ರಾಜ ಮಾತೆ ಎದ್ದು ನಿಂತು ತೆರೆದ ಮೊತ್ತವನ್ನು ಹೊಂದಿಸಲು ಪ್ರಯತ್ನಿಸುತ್ತೇವೆ ಎಂದಿದ್ದರು. ಹಿರಿಯರ ಸಭೆ ಅದನ್ನು ಒಪ್ಪದೆ ಪ್ರಜೆಗಳನ್ನು ಸುಲಿಗೆ ಮಾಡಿ ಮಾಡಿಕೊಂಡಿರುವ ಅಧಿಕಾರಿಗಳನ್ನು ಹಿಡಿದು ಅವರಿಂದ ಹಣ ಸಂಗ್ರಹಿಸುತ್ತೇನೆ ಎಂದಿದ್ದರು. ಹಾಗೆಯೇ ತೆರವನ್ನು ಸಂಗ್ರಹಿಸಿದರು ರಾಣಿ ವಾಸದಿಂದ ಮೂರು ಸಾವಿರ ಪಗೋಡಗಳು, ಹಿರಿಯರಿಂದ ಎರಡು ಸಾವಿರ ಪಗೋಡಗಳನ್ನು ಸಂಗ್ರಹಿಸಿದ್ದರು. ಮೈಸೂರು ರಾಜ್ಯದ ತುಂಬಾ ರಾಜ ಒಡೆಯರ್ ಮಾತುಗಳೇ ಕೇಳಿಬರುತ್ತಿದ್ದವು. ಇಂತಹ ಗಳಿಗೆಯಲ್ಲಿಯೇ ರಾಜ ಒಡೆಯರ್ ಸಿಂಹಾಸನವನ್ನು ಏರಿದರು.

**ಅ) ವಿಷ ಕುಡಿದು ಬದುಕಿದ ಸಂದರ್ಭ:**

ರಾಜ ಒಡೆಯರ್‌ರ ಭಟ್ಟನಾಯಕರಿಂದ ಅವಮಾನ ಅನುಭವಿಸಿದ ವೀರರಾಜಯ್ಯ ರಾಜ ಒಡೆಯರ್‌ರ ವಿರುದ್ಧ ಸೇಡು ತಿಳಿಸಿಕೊಳ್ಳಲು ಪ್ರಯತ್ನಿಸುತ್ತಿದ್ದನು. ರಾಜ ಒಡೆಯರ್ ಧಾರ್ಮಿಕತೆಯನ್ನು ಅವರ ಭಕ್ತಿಯನ್ನು ಮುಖ್ಯ ಅಸ್ತ್ರವನ್ನಾಗಿಸಿಕೊಂಡು ರಾಜನನ್ನು ಮುಗಿಸುವ ಕಾರ್ಯಕ್ಕೆ ಕೈ ಹಾಕಿ ಕಾರ್ಯಪ್ರವೃತ್ತನಾಧನು. ರಾಜರು ಯಾವಾಗಲೂ ಅರಮನೆಯ ಕೋಟೆಯ ಒಳಗೆ ಇರುವ ಲಕ್ಷ್ಮೀರಮಣದೇವಸ್ಥಾನದಕ್ಕೆ ಹೋಗಿಬರುವ ವಿಷಯ ತಿಳಿದು ಆ ದೇವಾಲಯದ ಅರ್ಚಕರಾದ ಶ್ರೀನಿವಾಸಯ್ಯನವರಿಂದ ಸಹಾಯ ಪಡೆಯಲು ಯತ್ನಿಸಿ ಅವರ ಮನವೊಲಿಸಲು ಪ್ರಯತ್ನಿಸಿದರು. ಅದಕ್ಕೆ ಒಪ್ಪದಿದ್ದಾಗ ಅವರನ್ನು ಬೆದರಿಸಿ ತೀರ್ಥದಲ್ಲಿ ವಿಷಯವನ್ನು ಹಾಕುವಂತೆ ಮಾಡಿದರು. ಎಂದಿನಂತೆ ಬಂದ ದೊರೆಗೆ ತೀರ್ಥವನ್ನು ನೀಡುವಾಗ ಅವರ ಕೈಗಳ ನಡುಕವನ್ನು ಗಮನಿಸಿದ ರಾಜ ಒಡೆಯರ್ ಅನುಮಾನ ಬಂದರೂ ತೀರ್ಥವನ್ನು ಸ್ವಲ್ಪ ಕುಡಿದಿದರಾದರೂ ಶ್ರೀನಿವಾಸಯ್ಯ "ಬೇಡಿ ನನ್ನೊಡೆಯಾ ತೀರ್ಥವನ್ನು ಕುಡಿದು ಈ ಪಾಪಿಯನ್ನು ನಿತ್ಯನಾರಕಿಯನ್ನಾಗಿಸದಿರಿ" ಎಂದು ಕೈ ಹಿಡಿದು ಕೊಡವಿದ್ದನು. ನಂತರ ನಡೆದ ವಿಷಯ ತಿಳಿಸಿದನು. ರಾಜನು ಸರ್ವಹಿರಿಯ ಸಭೆ ಕರೆದು ವೀರರಾಜಯ್ಯನ ಕಿವಿ ಮೂಗು ಕೊಯ್ದು ಬಿಟ್ಟುಬಿಡೋಣ

ಶ್ರೀನಿವಾಸಯ್ಯ ನಿಜ ಹೇಳಿದಕ್ಕೆ ಕನ್ನಂಬಾಡಿ ಗೋಪಾಲ ಕೃಷ್ಣಸ್ವಾಮಿ ದೇವಸ್ಥಾನಕ್ಕೆ ವರ್ಗಾವಣೆ ಮಾಡುವ ನಿರ್ಧಾರ ಮಾಡಿದರು. ತನ್ನ ಪ್ರಾಣ ತೆಗೆಯಲು ಬಂದವರ ತಲೆ ಕಾಯ್ದು ಕಳಿಸಿದರು.

**ಇ) ಶ್ರೀರಂಗಪಟ್ಟಣವನ್ನು ದಾನವಾಗಿ ಪಡೆದದ್ದು:**

ಶ್ರೀರಂಗಪಟ್ಟಣದ ರಾಜ ಶ್ರೀರಂಗರಾಯರಿಗೆ ಬೆನ್ನುಫಣಿ ಎಂಬ ವ್ರಜಾಡ್ಯದಿಂದ ಬಳಲುತ್ತಿದ್ದರು. ಇವರಿಗೆ ಇಬ್ಬರು ಹೆಂಡತಿಯರು ಇದ್ದರೂ ಸಂತಾನ ಭಾಗ್ಯವಿರಲಿಲ್ಲ. ಮೊದಲ ಹೆಂಡತಿ ಅಲಮೇಲಮ್ಮ ಎರಡನೆ ಹೆಂಡತಿ ಶ್ರೀರಂಗಮ್ಮ. ರೋಗದಿಂದ ಬಳಲುತ್ತಿದ್ದ ರಾಜ ತಾನು ಬದುಕುವುದು ಕಷ್ಟ ಎಂದು ತಿಳಿದು ತನಗೆ ಹಲವು ರೀತಿಯಲ್ಲಿ ಸಹಾಯ ಮಾಡಿದ, ವೀರಶೌರ್ಯಗಳನ್ನು ತುಂಬಿಕೊಂಡಿದ್ದ ರಾಜ ಒಡೆಯರ್‌ಗೆ ತನ್ನ ರಾಜ್ಯವನ್ನು ದಾನ ಮಾಡಲು ನಿರ್ಧರಿಸಿ ರಾಯಸವನು ಕಳುಹಿಸಿದರು. ಇತ್ತ ಮೈಸೂರಿನ ಅರಸರು ಸರ್ವಹಿರಿಯರ ಸಭೇ ಸೇರಿ ಈ ವಿಷಯವನ್ನು ಚರ್ಚಿಸಿ ದಾನವನ್ನು ತೆಗೆದುಕೊಳ್ಳದೇ ಯುದ್ಧಮಾಡಿ ತೆಗೆದುಕೊಳ್ಳಬೇಕೆಂದು ನಿರ್ಧರಿಸಿದರು. ಯುದ್ಧಮಾಡಿ ಗೆದ್ದರೆ ಅವರ ಧೈರ್ಯ ಪರಾಕ್ರಮಗಳಿಗೆ ದಕ್ಕಿದ ಗೆಲುವಿನ ಸನ್ಮಾನವಾಗುತ್ತದೆ. ಯಾರಿಂದಲೋ ಪ್ರಾಂತ್ಯವೊಂದನ್ನು ದಾನ ಪಡೆದರೆಂಬ ಅಪಖ್ಯಾತಿ ಇತಿಹಾಸದಲ್ಲಿ ದಾಖಲಾಗುವುದು ಬೇಡ ಎಂದು ಹಿರಿಯರ ಸಭೆ ನಿರ್ಧರಿಸಿದರೂ ಲಿಂಗಯ್ಯ ಮತ್ತು ವೀರಾಜಮ್ಮಣ್ಣಿಯವರು ಸಾಹಸ-ಧೈರ್ಯ, ಪರಾಕ್ರಮಗಳಂತಹ ಮೌಲ್ಯಗಳ ಜೊತೆಗೆ, ವಿಶ್ವಾಸ, ಕರುಣೆ, ದಯೆಗಳಾದಿ ಮಾನವೀಯ ಮೌಲ್ಯಗಳು ಮುಖ್ಯ ಎಂಬ ಮಾತಿಗೆ ಬೆಲೆನೀಡಿ, ಒಮ್ಮೆ ಶ್ರೀರಂಗಪಟ್ಟಣಕ್ಕೆ ಹೋಗಿ ಶ್ರೀರಂಗರಾಯನನ್ನು ಭೇಟಿಮಾಡಿ ಬರುವುದು ಎಂದು ನಿರ್ಧರಿಸಿ ಪರಿವಾರದೊಂದಿಗೆ ಶ್ರೀರಂಗಪಟ್ಟಣಕ್ಕೆ ಭೇಟಿನೀಡಿ ಶ್ರೀರಂಗರಾಯರ ಆರೋಗ್ಯವನ್ನು ವಿಚಾರಿಸಿದರು. ನಿಜಕ್ಕೂ ರಾಯಸದಲ್ಲಿ ಬರೆದಂತೆಯೇ ಅವನ ರೋಗ ಇಮ್ಮಡಿಯಾಗುತ್ತಿತ್ತು. ಇದನ್ನು ನೋಡಿ ರಾಜ ಒಡೆಯರ್‌ನ ಮನ ಸೋತಿತು. ಆದರೂ ರಾಜ್ಯವನ್ನು ನೀವೆ ನಡೆಸಿ ಸಹಾಯಕರಾಗಿ ನಾವು ನಿಮ್ಮ ಜೊತೆಯಲ್ಲಿ ಇರುವುದಾಗಿ ತಿಳಿಸಿದರು. ಆದರೂ ಇದನ್ನು ಒಪ್ಪದೇ ರಾಜ ಒಡೆಯರಿಗೆ ರಾಜ್ಯ ಒಪ್ಪಿಸಲು ನಿರ್ಧರಿಸಿದನು. ದಿಟಕ್ಕೂ ಅಸಹಾಯಕರಾಗಿ ಪೂರ್ಣ ವಿಶ್ವಾಸವಿಟ್ಟು ರಾಜ್ಯ ಕೊಡುವಾಗ ಅವರ ಮೇಲೆ ಯುದ್ಧ ಮಾಡುವುದು ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರ' ಎಂದಾಗುತ್ತದೆ ಎಂದು ರಾಜ್ಯವನ್ನು ದಾನಪಡೆದನು.

**ಈ) ಅಲಮೇಲಮ್ಮನ ಶಾಪ**

ಶ್ರೀರಂಗಪಟ್ಟಣದ ಮಹಾರಾಣಿಯಾದ ಅಲಮೇಲಮ್ಮ ತನ್ನ ಗಂಡನ ಅನಾರೋಗ್ಯದಿಂದ ಸಂತಾನ ಇಲ್ಲದೆ ಇರುವುದರಿಂದ ಶ್ರೀರಂಗಪಟ್ಟಣ ಇವರ ಕೈ ತಪ್ಪಿತ್ತು.

ಮಹಾರಾಜ ಶ್ರೀರಂಗರಾಯನು ರಾಜ್ಯವನ್ನು ರಾಜ ಒಡೆಯರ್‌ಗೆ ಒಪ್ಪಿಸುವುದು ಅಲಮೇಲಮ್ಮನವರಿಗೆ ಕಿಂಚಿತ್ತೂ ಇಷ್ಟವಿರಲಿಲ್ಲ. ಸರ್ವಹಿರಿಯರು ಯಾರಾದರೂ ವಿರೋಧಿಸಬಹುದೆಂದು ಕಾದು ಕುಳಿತಿದ್ದ ಇವಳಿಗೆ ಇಲ್ಲೂ ನಿರಾಶೆ ಉಂಟಾಯಿತು.

ಪಟ್ಟಣವನ್ನು ರಾಜ ಒಡೆಯರಿಗೆ ಒಪ್ಪಿಸಿ ಕೊನೆಯ ದಿನಗಳನ್ನು ಮಾಲಂಗಿಯಲ್ಲಿ ಕಳೆಯಲು ನಿರ್ಧರಿಸಿ ಮಿತ ಪರಿವಾರದೊಂದಿಗೆ ತಲಕಾಡಿನ ಮಾಲಂಗಿಗೆ ಬಂದರು. ಆದರೆ ಮಹಾರಾಣಿಯವರ ಮನಸೂ ಬಂಡೆಯಂತೆ ಜಡವಾಗತೊಡಗಿತ್ತು. ಮಹಾರಾಜ, ಮಹಾರಾಣಿ ಎನ್ನಿಸಿಕೊಂಡವರು. ಇಂದು ಈ ಕ್ಷಣ ಅಬ್ಬೆಪಾರಿಗಳಂತೆ ದೇಶಾಂತರ ಹೊರಟಿರುವ ಬಗೆಗೆ ಅವಳ ಮನಸು ಕೊತ ಕೊತ ಕುದಿಯುತ್ತಿತ್ತು. ಕೆಲ ದಿನಗಳಲ್ಲೇ ಶ್ರೀರಂಗರಾಯ ಮರಣ ಹೊಂದಿದ್ದನು. ಶ್ರೀರಂಗಪಟ್ಟಣದಲ್ಲಿ ರಾಜ ಒಡೆಯರ್ ಸಿಂಹಾಸನವನ್ನು ಹೇರಿ ಆಡಳಿತ ನಡೆಸಲು ಪ್ರಾರಂಭಿಸಿದಾಗ, ಎಲ್ಲಾ ದೇವಾಲಯಗಳು ಪುನಃ ವಿಜೃಂಭಿಸಲು ಪ್ರಾರಂಭವಾಯಿತು. ಆದರೆ ರಂಗನಾಯಕಿ ಅಮ್ಮನವರ ಪೂಜೆ ಪ್ರಾರಂಭವಾಗಿರುವುದಿಲ್ಲ. ಅಮ್ಮನವರ ಆಭರಣಗಳು ಅಲಮೇಲಮ್ಮನವರ ಬಳಿ ಇರುತ್ತಿತ್ತು. ಅವರು ಹೋದ ಮೇಲೆ ಎಲ್ಲಾ ಕಡೆ ಆಭರಣಗಳನ್ನು ಹುಡುಕಿಸಿ, ನಂತರ ಅನಂತಯ್ಯ ಅರಮನೆಯ ಕಾರುಭಾರಿಗಳೂ ಒಡವೆಗಳು ಅಲಮೇಲಮ್ಮನವರಲ್ಲಿಯೇ ಇರಬೇಕೆಂದು ಅವರನ್ನು ವಿಚಾರಿಸಲು ರಾಜನ ಅಪ್ಪಣೆಯೊಂದಿಗೆ ಬಂದಿದ್ದರು. ವಿಷಯ ತಿಳಿದ ಅಲಮೇಲಮ್ಮ "ಇದೊಂದು ಬೇರೆ ಬಾಕಿ ಇತ್ತೋ ನಿಮ್ಮ ಮಹಾರಾಜರಿಗೆ ನಾವು ತೀರಿಸಬೇಕಾದ ಸಾಲದಲ್ಲಿ" ಎಂದು ರಾಜನನ್ನು ಹಳಿಯುತ್ತಾ ಒಡವೆಗಳನ್ನು ಸೆರಗಿನಲ್ಲಿ ತುಂಬಿಕೊಂಡು ಮನೆಯಿಂದ ಬಿರುಗಾಳಿಯಂತೆ ಓಡಲು ಆರಂಭಿಸಿದರು. ಅವರ ಹಿಂದೆ ರಂಗಮ್ಮ, ಅಧಿಕಾರಿಗಳು, ಭಟ್ಟರು ಓಡಿದರು. ಅವರನ್ನು ತಡೆಯಲೆಂದು ಆದರೆ ಅಲಮೇಲಮ್ಮ ಕಾವೇರಿ ನದಿಯ ಎದುರಾಗಿ ನಿಂತು "ನಿಮ್ಮ ಮೈಸೂರರಸರ ವಂಶ ನಿರ್ವಂಶವಾಗಲಿ ರಾಜ್ಯಗಳು ಅಳಿಯುತ್ತವೆ. ರಾಜ್ಯಗಳು ಉದಯಿಸುತ್ತವೆ. ಆದರೆ ಒಂದು ಹೆಣ್ಣಿನ ಕಣ್ಣೀರಿನ ಕಥೆ ಯುಗಯುಗಾಂತರಗಳಿಗೂ ಕಾಡುವ ವ್ಯಥೆಗಳಾಗುತ್ತವೆ. ನನ್ನ ನೋವು ನಿಮ್ಮ ಮೈಸೂರರಸರನ್ನು ಕಾಡದೇ ಹೋಗುವುದಿಲ್ಲ. ಸತ್ತ ನಂತರವೂ ನಾನವರನ್ನು ಕಾಡುವವಳೆ.. ಇದಕ್ಕೆ ಕಾವೇರಿ ಮಾತೆಯೇ ಸಾಕ್ಷಿ" ಎಂದು ಕಾವೇರಿ ನದಿಯಲ್ಲಿ ಮುಳುಗಿ ಪ್ರಾಣಬಿಟ್ಟಳು.

### ಪಾತ್ರ ಪೋಷಣೆ

ರಾಜ ಒಡೆಯರ್ ಕಾದಂಬರಿಯೂ ಐತಿಹಾಸಿಕವಾಗಿದ್ದು ರಾಜ್ಯದ ಚೌಕಟ್ಟಿನ ಒಳಗೆ ನಡೆಯುವ ಕಾದಂಬರಿಯಾಗಿದೆ. ಇಲ್ಲಿ ಬರುವ ಪಾತ್ರಗಳ ಮೂಲಕ ಇತಿಹಾಸ ಮತ್ತು

ಐತಿಹ್ಯದ ಘಟನಾವಳಿಗಳನ್ನು ಮನೋಜ್ಞವಾಗಿ, ಕಲಾತ್ಮಕವಾಗಿ ಕಟ್ಟಿಕೊಡುವ ಕೆಲಸವನ್ನು ಪಾತ್ರಗಳ ಮೂಲಕ ಮಾಡಿಸಿದ್ದಾರೆ.

**ಅ) ವೀರಾಜಮ್ಮಣಿ:**

ಮಹಾರಾಜ ರಾಜ ಒಡೆಯರ್‌ನ ತಾಯಿ. ಇವರು ರಾಜಮಾತೆಯಾಗಿದ್ದು, ರಾಜ್ಯದ ಒಳಿತಿಗಾಗಿ, ವಂಶದ ಗೌರವ ಪ್ರತಿಷ್ಠೆಗಳಿಗಾಗಿ ಹಂಬಲಿಸುತ್ತಿದ್ದ ಜೀವ. ತನ್ನ ಗಂಡನ ಮರಣದ ನಂತರ ತನ್ನ ಮೊದಲ ಮಗ ಚಾಮರಾಜ ಒಡೆಯರ್ ಅಧಿಕಾರಕ್ಕೆ ಬಂದ ಮೇಲೆ ರಾಜ್ಯದಲ್ಲಿ ಉಂಟಾದ ಡೋಲಾಯಮಾನ ಪರಿಸ್ಥಿತಿಯನ್ನು ಕಂಡು ತುಂಬಾ ದುಃಖಿಸಿದರು. ಮಗ ವೀರ, ಶೂರ, ಉತ್ಸಾಹಿ ಬುದ್ಧಿವಂತನೆಂದುಕೊಳ್ಳುವ ಗುಣಗಳೇ ಅವನಲ್ಲಿ ಎದು ಕಾಣುತ್ತಿದ್ದವು. ಆದರೆ ಅವೆಲ್ಲಕ್ಕೂ ವಿರುದ್ಧವಾದ ಪಟ್ಟದ ನಿರಾಕರಣೆ ಮಾತ್ರ ತಾಯಿಗೆ ಅರ್ಥವಾಗಿರಲಿಲ್ಲ. ವೀರಾಜಮ್ಮಣಿಯವರು ಎಷ್ಟೋ ಬಾರಿ ಮಗನನ್ನು ಭೇಟಿ ಮಾಡಿ "ಅಪ್ಪನಾಗಿ ನಿನ್ನ ಈ ಮಾತುಗಳು ನಿನ್ನ ನಡೆ–ನುಡಿ ಯಾವುವೂ ನನಗೆ ತಪ್ಪು ಅನ್ನಿಸುತ್ತಿಲ್ಲ. ಚಾಮರಾಜ ಬದಲಾಗಿ ನನ್ನ ಮಗ ಎಷ್ಟೆಲ್ಲಾ ತಿಳಿದುಕೊಂಡಿದ್ದಾನೆಂದು ಅಭಿಮಾನವೆನ್ನಿಸುತ್ತದೆ. ಕಂದಾ ನೀನು ನನ್ನ ಮಗನಷ್ಟೇ ಅಲ್ಲ ಈ ನಾಡನ್ನು ಆಳುತ್ತಿರುವ ಪ್ರಭು ಎಲ್ಲರನ್ನೂ ಪೊರೆಯುವ ಮಹಾರಾಜ, ಧರ್ಮದೊಂದಿಗೆ ರಾಜಧರ್ಮವೂ ಬೇಕು. ನಿನ್ನ ಮಾತುಗಳಿಗೆ ಬೆಲೆ ಬರಬೇಕಾದರೆ ನೀನು ಕ್ರಿಯಾಶೀಲನಾಗಬೇಕು. ಕರ್ತವ್ಯವನ್ನು ಮರೆತು ಬೇಜವಾಬ್ದಾರಿಯಿಂದ ವರ್ತಿಸಬಾರದು. ನಾಡಿನಲ್ಲಿರುವ ಅರಾಜಕತೆ ಇರಲಿ. ಅರಮನೆಯೊಳಗೇ ಎಂತಹ ಅರಾಜಕತೆ ವ್ಯಾಪಿಸಿಕೊಂಡಿದೆ ಎಂಬುದನ್ನು ಅರ್ಥ ಮಾಡಿಕೋ ಇಲ್ಲದಿದ್ದರೆ ನಾಡಿಗೇ ಕಷ್ಟ ಒದಗಿ ಬಂದುಬಿಡುತ್ತದೆ. ನಾಡನ್ನು ನಾಡಿನ ಜನರನ್ನು ಸಲಹಬೇಕಾದವರೇ ಅದರ ಕಷ್ಟಕ್ಕೆ ಕಾರಣವಾಗುವುದಕ್ಕಿಂತ ಪಾಪದ ಕೆಲಸ ಬೇರೆ ಯಾವುದೂ ಇಲ್ಲ ಮಗನೇ" ಎಂದು ಬುದ್ಧಿ ಹೇಳುತ್ತಿದ್ದರು. ಆದರೂ ಮಗನ ಆಡಳಿತವನ್ನು ನೋಡಿ ಸರ್ವ ಹಿರಿಯರು "ಸರ್ವಹಿರಿಯರ ಸಭೆ"ಯನ್ನು ಕರೆದರು. ಈ ವಿಷಯ ತಿಳಿದ ರಾಜಮಾತೆ ತಳಮಳಕ್ಕೆ ಒಳಗಾದರು ರಾಜನನ್ನು ಕೆಳಗಿಳಿಸಿ ಬೇರೆ ಯಾರನ್ನೋ ರಾಜನನ್ನು ಮಾಡಿಬಿಟ್ಟರೇ ಎಂಬ ಆತಂಕದಿಂದಲೇ ಸರ್ವ ಹಿರಿಯರ ಸಭೆಯಲ್ಲಿ ಭಾಗವಹಿಸಿದಳು. ಹಿರಿಯರ ಸಭೆಯು ನಿಷ್ಪಕ್ಷಪಾತವಾಗಿ ಚರ್ಚೆ ನಡೆಸಿ ನಾಡಿಗಾಗಿ ನಾಡಿನ ಜನರ ನೆಮ್ಮದಿಗಾಗಿ ಮಹಾರಾಜರನ್ನು ಸಿಂಹಾಸನದಿಂದ ಇಳಿಸುವ ಸರ್ವ ಸಮ್ಮತ ನಿರ್ಧಾರಕ್ಕೆ ಬಂದಿರುವುದನ್ನು ಕೇಳಿ ದುಃಖಿತರಾದ ಇವರು ಅದೇ ಸಿಂಹಾಸನಕ್ಕೆ ಇವರ ಎರಡನೇ ಪುತ್ರ ರಾಜ ಒಡೆಯರ್ ಸಿಂಹಾಸನದ ಮೇಲೆ ಕೂರಿಸುವ ನಿರ್ಧಾರವನ್ನು ಕೇಳಿ ನಿಟ್ಟುಸಿರುಬಿಟ್ಟಿದ್ದರು. ವಿಜಯನಗರದ ಪ್ರತಿನಿಧಿಗೆ ಒಪ್ಪಿಸಬೇಕಾದ ಮೊತ್ತದಲ್ಲಿ ಮೂರುಸಾವಿರ ಪಗೋಡವನ್ನು

ಹೊಂದಿಸಿಕೊಟ್ಟಿದ್ದರು. ರಾಜ ಒಡೆಯರ್ ಕಾರ್ಯ ವೈಖರಿ ನೋಡಿ ಸಂತೋಷಗೊಂಡಿದರು. ಆಗಾಗ ಮಗನಿಗೆ ತಿಳುವಳಿಕೆಯನ್ನು ನೀಡಿ ಎಚ್ಚರಿಸುತ್ತಿದ್ದರು.

**ರಾಜ ಒಡೆಯರ್**

ಮೈಸೂರು ರಾಜ್ಯವನ್ನು ಆಳಿದ ಪ್ರಮುಖ ದೊರೆಗಳಲ್ಲಿ ಒಬ್ಬರು ಇವರು ರಾಜತನವನ್ನು ಬಯಸಿರಲಿಲ್ಲ. ಆದರೆ ತನ್ನ ಅಣ್ಣ ಚಾಮರಾಜ ಒಡೆಯರ ನಿರಾಸಕ್ತಿ ಬೇಜವಾಬ್ದಾರಿತನದಿಂದ ಬೇಸತ್ತು ಸರ್ವಹಿರಿಯರ ಸಭೆಯೂ ರಾಜ ಒಡೆಯರ್‌ನನ್ನು ಸಿಂಹಾಸನದ ಮೇಲೆ ಕೂರಿಸಿತ್ತು. ಅಧಿಕಾರ ವಹಿಸಿಕೊಂಡ ನಂತರ ಅರಮನೆಯ ಉಳಿಗದವರಿಗೆ ಜವಾಬ್ದಾರಿಯನ್ನು ಹಂಚಿ ಸಂಬಳವನ್ನು ಹೆಚ್ಚುಮಾಡಿ ಅರಮನೆಯ ಒಳಗಿನ ವಾತಾವರಣವನ್ನು ಬಿಗಿಗೊಳ್ಳಿಸಿದನು. ನಂತರ ಅಧಿಕಾರಿಗಳಿಗೆ ವೇತನವನ್ನು ಹೆಚ್ಚುಮಾಡಿ ಭ್ರಷ್ಟಚಾರವನ್ನು ಮಾಡದಂತೆ ನಿಷ್ಠೆಯಿಂದ ಕೆಲಸ ಮಾಡುವಂತೆ ಮಾಡಿದನು. ವೀರಾರಾಜಯ್ಯ ಇವರ ಮೇಲಿನ ದ್ವೇಷದಿಂದಾಗಿ ಶ್ರೀನಿವಾಸ ಎಂಬ ಅರ್ಚಕರನ್ನು ಹೆದರಿಸಿ ತೀರ್ಥದಲ್ಲಿ ವಿಷಹಾಕಿಕೊಡುವಂತೆ ಮಾಡಿದನು. ಈ ವಿಷಯ ತಿಳಿದ ಒಡೆಯರ್ ಇವರನ್ನು ಸಾಯಿಸದೆ ಕಿವಿ, ಮೂಗುಗಳನ್ನು ಕೊಯ್ದು ವೀರಾಜಯ್ಯನನ್ನು ಬಿಟ್ಟುಬಿಡುವುದಾಗಿ ಶ್ರೀನಿವಾಸಯ್ಯರವರನ್ನು ಕನ್ನಂಬಾಡಿ ಗೋಪಾಲಕೃಷ್ಣಸ್ವಾಮಿ ದೇವಾಲಯಕ್ಕೆ ವರ್ಗಾವಣೆ ಮಾಡುವ ನಿರ್ಧಾರ ಮಾಡಿ ಕೊಲ್ಲಲು ಬಂದವರ ತಲೆ ಕಾಯ್ದು ಒಳ್ಳೆತನವನ್ನು ಮೆರೆದರು. ಅಲ್ಲದೆ ರೋಗದಿಂದ ಬಳಲುತ್ತಿದ್ದ ಶ್ರೀರಂಗರಾಯನಿಗೆ ಹಲವು ಬಾರಿ ಸಹಾಯಮಾಡಿದನು. ರೋಗದಿಂದ ಸಾಯುವ ಹಂತಕ್ಕೆ ತಲುಪಿದ ಶ್ರೀರಂಗರಾಯನು ತನ್ನ ಶ್ರೀರಂಗಪಟ್ಟಣವನ್ನು ಕಾಯ್ದು ಮುನ್ನಡೆಸುವ ಶೌರ್ಯ ವೀರತ್ವವನ್ನು ಹೊಂದಿರುವ ರಾಜ ಒಡೆಯರಿಂದ ಮಾತ್ರ ಸಾಧ್ಯವೆಂದು ತಿಳಿದು ಅವರಿಗೆ ರಾಜ್ಯವನ್ನು ದಾನಮಾಡಲು ನಿರ್ಧರಿಸಿದ್ದರು. ಹಾಗೆಯೇ ಸರ್ವಹಿರಿಯರ ನಿರ್ಧಾರದಂತೆ ಶ್ರೀರಂಗರಾಯರ ಅಸಹಾಯಕತೆ ನೋಡಿ ಶ್ರೀರಂಗಪಟ್ಟಣವನ್ನು ದಾನವಾಗಿ ಪಡೆದರು. ಆದರೆ ಇದು ಶ್ರೀರಂಗರಾಯರ ಮೊದಲ ಹೆಂಡತಿ ಅಲಮೇಲಮ್ಮನವರಿಗೆ ಇಷ್ಟವಿರಲಿಲ್ಲ. ಆದರೂ ಗಂಡನ ಆಸೆಯಂತೆ ರಾಜ್ಯವನ್ನು ಒಪ್ಪಿಸಿ ತಲಕಾಡಿನ ಮಾಲಂಗಿಯಲ್ಲಿ ನೆಲೆಸಿದರು. ಕಾಲಕ್ರಮೇಣವಾಗಿ ರಂಗನಾಯಕಿ ದೇವಾಲಯದ ಪೂಜೆಯ ಸಂದರ್ಭ ದೇವಿಯ ಆಭರಣಗಳು ಅಲಮೇಲಮ್ಮನವರಲ್ಲಿ ಇರಬಹುದೆಂದು ಅರಮನೆಯ ಅಧಿಕಾರಿಗಳ ಹೇಳಿಕೆಯ ಮೇರೆಗೆ ಅಲಮೇಲಮ್ಮನವರನ್ನು ವಿಚಾರಿಸಲು ಕಾರುಬಾರಿಗಳನ್ನು ಭಟ್ಟರನ್ನು ಮಾಲಂಗಿಗೆ ಕಳುಹಿಸಿದರು. ಆದರೆ ಈ ವಿಷಯ ತಿಳಿದ ಅಲಮೇಲಮ್ಮ ಮೈಸೂರು ರಾಜನನ್ನು ಹಳಿಯುತ್ತಾ ಓಡಿಹೋಗಿ ಕಾವೇರಿ ನದಿಯಲ್ಲಿ ಮುಳುಗುವ ಮುನ್ನ "ಮೈಸೂರು ನಿರ್ವಂಶವಾಗಲಿ" ಎಂದು ಶಾಪವಿತ್ತರು. ಇದರಿಂದಾಗಿ

ತೀವ್ರ ಅಘಾತಕ್ಕೆ ಒಳಗಾದ ರಾಜ ಒಡೆಯರ್ ಪೂಜೆ ಪುನಸ್ಕಾರಗಳನ್ನೂ ಮಾಡಿದರು. ಶಾಪ ವಿಮೋಚನೆಯಾಗುವ ಯಾವ ಲಕ್ಷಣಗಳು ಕಾಣದೆ ಅದೇ ಸಮಯಕ್ಕೆ ರಾಜಕುಮಾರ ನರಸರಾಜರ ಮರಣ ಇವರಿಗೆ ಇನ್ನೊಂದು ರೀತಿಯ ನೋವನ್ನು ನೀಡಿತು. ಈ ದುಃಖದಿಂದ ನರಳಿ ೧೯೪೦ರಲ್ಲಿ ಮರಣಹೊಂದಿದರು.

**ಅಲಮೇಲಮ್ಮ:**

ರಾಜ ಒಡೆಯರ್ ಕಾದಂಬರಿಯಲ್ಲಿ ಬರುವ ಗಮನಸೆಳೆಯುವಂತಹ ಪಾತ್ರ ಈ ಪಾತ್ರದ ಮೂಲಕ ಹೆಣ್ಣಿನ ಶಾಪ ನಿರಂತರವಾಗಿ ಕಾಣುತ್ತದೆ ಎಂಬುದನ್ನು ನೀಡಹೊರಟಿದ್ದಾರೆ ಲೇಖಕಿ. ಅಲಮೇಲಮ್ಮನವರು ಶ್ರೀರಂಗಪಟ್ಟಣದ ರಾಜ ಶ್ರೀರಂಗರಾಯರ ಮೊದಲನೆ ಹೆಂಡತಿ ಇವರಿಗೆ ಮಕ್ಕಳಿಲ್ಲದ ಕಾರಣ ರಾಜ ಎರಡನೆಯ ವಿವಾಹವನ್ನು ಶ್ರೀರಂಗಮ್ಮರೊಂದಿಗೆ ಆದರು. ಆದರೆ ಇವರಿಗೂ ಮಕ್ಕಳಾಗಲಿಲ್ಲ. ಕಾಲಕ್ರಮೇಣದಲ್ಲಿ ಶ್ರೀರಂಗರಾಯ ಬೆನ್ನುಫಣಿ ಎಂಬ ರೋಗಕ್ಕೆ ತುತ್ತಾಗಿದರು. ಈ ರೋಗವೂ ಕಾಲಕ್ರಮೇಣ ಹೆಚ್ಚಾಗಿ ಬದುಕಿ ಉಳಿಯುವ ಸಾಧ್ಯತೆ ಕಡಿಮೆಯಾದಾಗ ರಾಜ ಒಡೆಯರಿಗೆ ರಾಜ್ಯ ಒಪ್ಪಿಸಲು ನಿರ್ಧರಿಸಿದರು. ಆದರೆ ಈ ನಿರ್ಧಾರ ಅಲಮೇಲಮ್ಮನಿಗೆ ಇಷ್ಟವಿರಲಿಲ್ಲ. ಇದರಿಂದಾಗಿಯೇ ಅಲಮೇಲಮ್ಮನವರಿಗೆ ರಾಜ ಒಡೆಯರ್ ಹೆಸರು ಕೇಳಿದರೆ ಸಾಕು ಕೋಪ ಬರುತ್ತಿತ್ತು. ಶ್ರೀರಂಗರಾಯ ನಿಗದಿಯಂತೆ ರಾಜ್ಯವನ್ನು ಒಡೆಯರಿಗೆ ಒಪ್ಪಿಸಿ ಹೊರಡುವ ವೇಳೆ ಅಲಮೇಲಮ್ಮ ಜಡವಾಗಿಬಿಟ್ಟಿದರು. ಅಬ್ಬೆಪಾರಿಗಳಂತೆ ದೇಶಾಂತರ ಹೊರಟಿರುವ ಬಗೆಗೆ ಮನಸು ಕೊತ ಕೊತ ಕುದಿಯುತ್ತಿತ್ತು. ಕೆಲವು ದಿನಗಳಲ್ಲೇ ಶ್ರೀರಂಗರಾಯರು ಮರಣ ಹೊಂದಿದ್ದರು. ಇವರು ಮರಣ ಹೊಂದಿದ ನಂತರ ರಾಜ ಒಡೆಯರ್ ಸಿಂಹಾಸನವನ್ನು ಏರಿದರು. ದೇವಾಲಯಗಳಲ್ಲಿ ಮತ್ತೆ ಪೂಜೆಗಳು ಪ್ರಾರಂಭವಾದವು. ಆದರೆ ರಂಗನಾಯಕಿ ಅಮ್ಮನವರ ಆಭರಣಳು ಇಲ್ಲದೆ ಇರುವ ಕಾರಣ ಅರಮನೆಯ ಅಧಿಕಾರಿಗಳು ಅಲಮೇಲಮ್ಮರವರನ್ನು ವಿಚಾರಿಸಲು ಬಂದಾಗ "ಇದೊಂದು ಬೇರೆ ಬಾಕಿ ಇತ್ತೋ ನಿಮ್ಮ ಮಹರಾಜರಿಗೆ ನಾವು ತೀರಿಸಬೇಕಾದ ಸಾಲದಲ್ಲಿ ಎಂದು ಅಕ್ರೋಶ, ಆರೋಪಗಳನ್ನು ವ್ಯಕ್ತಪಡಿಸುತ್ತಾ ಅರಚಾಡಿದರು. ಅವರನ್ನು ಸಮಾಧಾನಿಸಲು ಬಂದ ಶ್ರೀರಂಗಮ್ಮ ಅಧಿಕಾರಿಗಳ ಜೊತೆ ಮಾತನಾಡುತ್ತಿರುವಾಗಲೇ ಅಲಮೇಲಮ್ಮ ತನ್ನ ಮಡಲಿನಲ್ಲಿ ಒಡವೆಗಳನ್ನು ತುಂಬಿಕೊಂಡು ಮನೆಯಿಂದ ಓಡತೊಡಗಿದರು. ಶ್ರೀರಂಗಮ್ಮ ಅವರ ಹಿಂದೆಯೇ ಓಡುತ್ತಾ ನಿಲ್ಲಿ ಅಕ್ಕ ನಿಲ್ಲಿರಿ" ಎಂದು ಕರೆದರು ಓಡುತ್ತಿದ್ದರು. ಅವರ ಹಿಂದೆಯೇ ಅಧಿಕಾರಿಗಳು ಭಟ್ಟರು ಓಡುತ್ತಿದ್ದರು. ಅಲಮೇಲಮ್ಮನವರ ಓಟ ಕಾವೇರಿ ನದಿಯಲ್ಲಿ ನಿಂತಿತ್ತು. "ನಿಮ್ಮ ಮೈಸೂರರಸರ ವಂಶ ನಿರ್ವಂಶವಾಗಲಿ ರಾಜ್ಯಗಳು ಅಳಿಯುತ್ತವೆ.

ರಾಜ್ಯಗಳು ಉದಯಿಸುತ್ತವೆ. ಆದರೆ ಒಂದು ಹೆಣ್ಣಿನ ಕಣ್ಣೀರಿನ ಕಥೆ ಯುಗಯುಗಾಂತರಗಳಿಗೂ ಕಾಡುವ ವ್ಯಥೆಗಳಾಗಿರುತ್ತವೆ. ನಾನು ಸತ್ತ ನಂತರವೂ ಮೈಸೂರರಸರನ್ನು ಕಾಡದೇ ಹೋಗುವುದಿಲ್ಲ. ಇದಕ್ಕೆ ಕಾವೇರಿ ಮಾತೆಯೇ ಸಾಕ್ಷಿ" ಎಂದು ಕಾವೇರಿ ನದಿಯಲ್ಲಿ ಮುಳುಗಿ ಹೋದರು.

**ಪೂರಕ ಪಾತ್ರಗಳು**

**೧) ಚಾಮರಾಜ ಒಡೆಯರ್**

ಚೋಳ ಚಾಮರಾಜರ ಹಿರಿಯ ಮಗ ಬೆಟ್ಟದ ಚಾಮರಾಜ ಒಡೆಯರ್. ಮಹಾರಾಜರ ಕಾಲದ ನಂತರ ಬೆಟ್ಟದ ಚಾಮರಾಜ ಒಡೆಯರ್‌ಗೆ ಪಟ್ಟ ಕಟ್ಟಲಾಯಿತು. ಆದರೆ ಇವರಿಗೆ ಇದು ಇಷ್ಟವಿರಲಿಲ್ಲ. ಆದರೂ ಸರ್ವ ಹಿರಿಯರು ಸೇರಿ ಒತ್ತಾಯಮಾಡಿ ಪಟ್ಟಾಭಿಷೇಕ ಮಾಡಿದರು. ಒಂದು ನಾಡಿನ ಜವಾಬ್ದಾರಿ ತನ್ನ ಮೇಲಿದೆ. ಅದಕ್ಕಾಗಿಯಾದರೂ ತಾನು ಒಂದಷ್ಟು ಬದಲಾಗಬೇಕು ಎಂಬುದನ್ನವರು ಆಲೋಚಿಸಲು ಹೋಗಲೇ ಇಲ್ಲ. ಅವರ ಓದು, ಧಾರ್ಮಿಕತೆಗಳ ನಡುವೆ ಅದೊಂದು ಬಗೆಯ ವೈರಾಗ್ಯವೂ ಒಂದು ಅಮರಿಕೊಂಡಿತ್ತು. ದಿನಬೆಳಗಾದರೆ ಎದುರಾಗುವ ನಾಡ ಜನರ ಚಿತ್ರವಿಚಿತ್ರ ಸಮಸ್ಯೆಗಳು ಆಡಳಿತದ ಗೋಜಲುಗಳು, ವಿಭಿನ್ನ ಮನಃಸ್ಥಿತಿಗಳ ನೂರಾರು ಜನರ ರೀತಿನೀತಿಗಳು ಮಹಾರಾಜರಲ್ಲಿ ಲೌಕಿಕದ ಅರಿವು ಮೂಡಿಸುವುದಕ್ಕೆ ಬದಲಾಗಿ ಆ ಬಗೆಗೆ ವಿಮುಖವಾಗುವ ಪರಿಯನ್ನು ಹೆಚ್ಚಿಸತೊಡಗಿತು. ಇವರು ತೋರಿದ ನಿಷ್ಕ್ರೀಯತೆಯನ್ನು ಅರಮನೆಯ ಓರ್ವ ಸಾಮಾನ್ಯ ಊಲಿಗದವರು ತಮ್ಮ ಕೆಲಸವನ್ನು ಮರೆತುಬಿಟ್ಟು ಅವರೇ ರಾಜ, ರಾಣಿಯರಂತೆ ವರ್ತಿಸತೊಡಗಿದ್ದರು. ಆಡಳಿತ ವ್ಯವಸ್ಥೆ ಡೋಲಾಯಮಾನ-ವಾಯಿತು. ಇದನ್ನು ಅರಿತ ಹಿರಿಯರು ಅಧಿಕಾರಿಗಳು, "ಸರ್ವಹಿರಿಯರ ಸಭೆ" ಸೇರಿಸಿ ನಾಡಿನ ಒಳಿತಿಗಾಗಿ ನಾಡ ಜನರ ನೆಮ್ಮದಿಗಾಗಿ ಚಾಮರಾಜರನ್ನು ಸಿಂಹಾಸನದಿಂದ ಇಳಿಸುವ ನಿರ್ಧಾರವನ್ನು ಸರ್ವಸಮ್ಮತದಿಂದ ಕೈಗೊಂಡರು. ಆ ಸಿಂಹಾಸನಕ್ಕೆ ಇವರ ತಮ್ಮನಾದ ರಾಜಒಡೆಯರ್‌ನನ್ನು ಕೂರಿಸುವ ನಾಡಿನ ಪ್ರಭುವನ್ನಾಗಿ ಮಾಡುವ ನಿರ್ಧಾರವನ್ನು ಪ್ರಕಟಿಸಿತ್ತು. ಇದರಿಂದಾಗಿ ಚಾಮರಾಜ ಒಡೆಯರು ಸಂಪೂರ್ಣ ಡೋಲಾಯಮಾನ ಮನಃಸ್ಥಿತಿಯಲ್ಲಿದ್ದರು.

**ಅಜ್ಜಯ್ಯ:**

ಮೈಸೂರಿನ ಸರ್ವಹಿರಿಯರ ಸಭೆಯ ಸದಸ್ಯ. ಅದಕ್ಕಿಂತಲೂ ಹೆಚ್ಚಾಗಿ ಹಿರಿಯ ಸದಸ್ಯರು ಮುಖ್ಯಸ್ಥರಾಗಿರುತ್ತಾರೆ. ಬೆಟ್ಟದ ಚಾಮರಾಜ ಒಡೆಯರನ್ನು ಪದಚ್ಯುತಿಗೊಳಿಸುವಾಗಿನ ಸಭೆಯ ಚಾಲನೆ ನೀಡಿ ಮಾತು ಆರಂಭಿಸಿದವರು ಅಜ್ಜಯ್ಯನವರೇ

"ಈ ಸಭೆ ಮಹಾರಾಜರ ವಿರುದ್ಧವಾಗಿ ಕರೆದಿರುವುದೆಂದು ಮಹಾರಾಜರಾಗಲಿ, ರಾಜಮಾತೆಯಾಗಲಿ ದಯವಿಟ್ಟು ಭಾವಿಸಬಾರದು ನಾಡಿನ ಹಿತದೃಷ್ಟಿಯಿಂದ ಸರ್ವಜನರ ಹಿತವನ್ನು ಕೋರುತ್ತಾ ಕರೆದಿರುವ ಸಭೆ ಇದು. ಜನರಿದ್ದರೆ ನಾಡು, ನಾಡಿದ್ದರೆ ರಾಜ. ಜನರೇ ಇಲ್ಲದಿದ್ದರೆ ನಾಡು ರೂಪುಗೊಳ್ಳಲು ಸಾಧ್ಯವಿಲ್ಲ. ನಾಡೇ ಇಲ್ಲದಿದ್ದರೆ ರಾಜತ್ವಕ್ಕೆ ಯಾವ ಬೆಲೆ ಬರಲೂ ಸಾಧ್ಯವಿಲ್ಲ. ಅಂತಹ ನಾಡಿನ ಹಿತವನ್ನು ಉಳಿಸಿಕೊಳ್ಳುವ ಸಲುವಾಗಿ ಮಾತ್ರ ಈ ಸಭೆ ಸೇರಿರುವುದು" ಅಜ್ಜಯ್ಯ ಬಹಳ ಸಂಕೋಚಪಡುತ್ತಲೇ ಹೇಳತೊಡಗಿದ್ದರು. ರಾಜ ಒಡೆಯರ್ ಅಧಿಕಾರ ವಹಿಸಿಕೊಂಡ ನಂತರ ಸಾಮ್ರಾಜ್ಯವನ್ನು ವಿಸ್ತರಿಸಲು ಯುದ್ಧ ಮಾಡುವ ಪ್ರಸ್ತಾವ ಇಟ್ಟಿದಾಗ "ಇದೇ ತಾನೆ ನಾಡಿನವರು ನೆಮ್ಮದಿಯಿಂದ ಉಸಿರಾಡಲಾರಂಭಿಸಿದ್ದಾರೆ. ನಾಡಪ್ರಭು ಯುದ್ಧದತ್ತ ತಮ್ಮ ಚಿತ್ತ ಹರಿಸಿದರೆ ಅನಿವಾರ್ಯವಾಗಿ ಯುದ್ಧ ತೆರವವನ್ನು ಪ್ರಜೆಗಳಿಂದ ವಸೂಲಿ ಮಾಡಬೇಕಾಗುತ್ತದೆ. ಅದು ಪ್ರಜೆಗಳಿಗೆ ಅಧಿಕ ಹೊರೆಯಾಗುವುದಿಲ್ಲವೆ? ಪ್ರಜೆಗಳೂ ಅಸಂತೃಪ್ತರಾದಷ್ಟೂ ರಾಜರ ಮೇಲೆ ಅವರು ಇರಿಸಿರುವ ವಿಶ್ವಾಸ ಸಡಿಲವಾಗಿ ಬಿಡುತ್ತದೆ" ಎಂಬ ಹಿತನುಡಿಯನ್ನು ಹೇಳುತ್ತಿದ್ದರು. ಅಲ್ಲದೆ ಸಾಹಸ, ಧೈರ್ಯ, ಪರಾಕ್ರಮಗಳಂತಹ ಯುದ್ಧ ಮೌಲ್ಯಗಳಷ್ಟೇ ಅಲ್ಲದೆ ಸ್ನೇಹ, ವಿಶ್ವಾಸ, ಕರುಣೆ ದಯೆಗಳಾದಿ ಮಾನವೀಯ ಮೌಲ್ಯಗಳು ಇರಬೇಕು. ರಾಜನಾದವರಿಗೆ ಮಾತೃಹೃದಯವೂ ಇರಬೇಕು ಎಂದು ತಿಳುವಳಿಕೆಯ ಜೊತೆಗೆ ಆಡಳಿತ ವೈಖರಿಯ ಬಗೆ ಸಲಹೆ, ಸೂಚನೆಗಳನ್ನು ನೀಡಿದರು.

**ರಾಜ ಒಡೆಯರ್ ಪತ್ನಿ ವೀರಾಜಮ್ಮಣ್ಣಿ:**

ರಾಜ ಒಡೆಯರ್ ಸಿಂಹಾಸನ ಮೇಲೆ ಕೂತು ಆಡಳಿತ ನಡೆಸಲು ಪ್ರಾರಂಭಿಸಿದ ಮೇಲೆ ಅರಮನೆಯ ಒಳಗೆ ಸಲಹೆಯನ್ನು ನೀಡಿ ಧೈರ್ಯ ತುಂಬುತ್ತಿದ್ದದ್ದು ವೀರಾಜಮ್ಮಣ್ಣಿಯವರು. ಶ್ರೀರಂಗರಾಯರು ಶ್ರೀರಂಗಪಟ್ಟಣವನನು ದಾನ ಮಾಡುವ ವಿಷಯದಲ್ಲಿ ಹೆಚ್ಚು ತಲೆಕೆಡಿಸಿಕೊಂಡಿದ್ದ ಮಹಾರಾಜರಿಗೆ ಶ್ರೀರಂಗಪಟ್ಟಣಕ್ಕೆ ಭೇಟಿನೀಡಿ ಶ್ರೀರಂಗರಾಯ ಬಗೆಗೆ ತಿಳಿದು ಅನಂತರ ಯುದ್ಧ ಬೇಡವೇ? ಯುದ್ಧ ಬೇಕೇ? ಎಂಬುದನ್ನು ಯೋಚಿಸಿರಿ 'ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರ' ಎಂಬಲ್ಲಿ ನ್ಯಾಯಧರ್ಮಗಳು ಇರುವುದಿಲ್ಲ. ಪ್ರಭು ಎಂಬ ಮಾತು ರಾಜರಿಗೆ ನೆಮ್ಮದಿಯನ್ನು ನೀಡಿತ್ತು. ಮಹಾರಾಣಿ ಅಲಮೇಲಮ್ಮನವರ ವಿಷಯದಲ್ಲೂ ಧೈರ್ಯ ಹೇಳಿದರು. ಶ್ರೀರಂಗರಾಯರ ಅಸ್ವಸ್ಥತೆ ಮತ್ತು ಅಸಹಾಯಕತನಗಳು, ಮಹಾರಾಣಿಯರಿಗೆ ರಾಜ್ಯ, ಅರಮನೆ, ಅಧಿಕಾರ ಎಲ್ಲವನ್ನು ಬಿಟ್ಟುಕೊಡಬೇಕೆನ್ನುವಾಗ ಅತಂತ್ರ ಮನಸ್ಥಿತಿ ಕಾಡುತ್ತಿದೆ ಎಂದು ರಾಣಿಯ ಮನಃಸ್ಥಿತಿಯ ಬಗೆಗೆ ತಿಳಿಸಿ ಸಮಾಧಾನಿಸಿದರು. ಅಲಮೇಲಮ್ಮ ದೇವಿಯ ಆಭರಣಗಳನ್ನು

ತೆಗೆದುಕೊಂಡು ಹೋಗಿದ್ದಾರೆಯೇ ಅಥವಾ ಇಲ್ಲವೇ ಎಂಬುದನ್ನು ತಿಳಿಯಲು ಅಧಿಕಾರಿಗಳನ್ನು ಮಾಲಂಗಿಗೆ ಕಳುಹಿಸಬೇಕೊ, ಬೇಡವೊ ಎಂಬ ದ್ವಂದ್ವದಲ್ಲಿದ್ದ ಮಹಾರಾಜರಿಗೆ ರಾಣಿ ಅಲಮೇಲಮ್ಮನವರು ಉದ್ದೇಶಪೂರ್ವಕವಾಗಿಯೇ ಕೊಂಡೊಯ್ದಿದ್ದರೆ ಮರಳಿ ಕೊಡಲು ನಿರಾಕರಿಸುತ್ತಾರೆ. ಅನಂತರ ಬೇಕಾದರೆ ಅಮ್ಮನವರಿಗೆ ಹೊಸ ಚಿನ್ನಾಭರಣಗಳನ್ನು ಮಾಡಿಸಿದರೆ ಆಗುತ್ತದೆ. ಅಲಮೇಲಮ್ಮನವರ ಮನಸ್ಸಿನಲ್ಲಿ ಏನಿದೆಯೋ ತಿಳಿದು ಅನಂತರ ಏನು ಮಾಡಬೇಕೆಂದು ನಿರ್ಧರಿಸುವುದು ಎಂಬ ಸಲಹೆ ನೀಡಿದರು. ಹೀಗೆ ರಾಜರಿಗೆ ಪ್ರತಿ ಹಂತದಲ್ಲೂ ಸಲಹೆಯನ್ನು ನಿಡುವ ಮೂಲಕ ಧೈರ್ಯವನ್ನು ಅವರಲ್ಲಿ ತುಂಬುತ್ತಿದ್ದರು.

**ಅಭಿವ್ಯಕ್ತಿ/ಶೈಲಿ**

ಇತರ ಕಾದಂಬರಿಗಳಂತೆ ರಾಜ ಒಡೆಯರ್ ಕಾದಂಬರಿಯೂ ಸರಳವಾದ ಭಾಷೆಯನ್ನು ಹೊಂದಿದ್ದು ಸಾಮಾನ್ಯ ಜನರಿಗೂ ಅರ್ಥವಾಗುವಂತಿದೆ. ಲೇಖಕಿಯ ಪ್ರಬುದ್ಧ ಭಾಷೆ. ಆಕರ್ಷಕ ನಿರೂಪಣಾ ಶೈಲಿ, ಮನಕಲಕುವ ಖಡಕ್ ಸಂಭಾಷಣೆಗಳು ಓದುಗರ ಗಮನವನ್ನು ಸೆಲೆಯುವಂತಿವೆ. ಈ ಕಾದಂಬರಿಯಲ್ಲೂ ಗಾದೆ, ನುಡಿಗಟ್ಟುಗಳನ್ನು ಅಲ್ಲಲ್ಲಿ ಕಾಣಬಹುದಾಗಿದೆ.

'ಶತ್ರುಶೇಷ ಉಳಿಯಬಾರದು" ಎಂಬ ಮಾತನ್ನು ರಾಜಮಾತೆ ರಾಜ ಒಡೆಯರ್‌ಗೆ ಎಚ್ಚರಿಕೆ ನುಡಿಯಾಗಿ ನುಡಿಯುತ್ತಾಳೆ. ಏಟು ತಿಂದ ಹಾವಿನಂತಾದ ವೀರರಾಜಯ್ಯನವರಿಂದ ದೂರವಿರಲು ಅವನಿಗೆ ಬುದ್ಧಿ ಕಲಿಸಲು ತಿಳಿಸಿದರು. "ಪುತ್ರಶೋಕಂ ನಿರಂತರಂ" ಎಂಬ ಮಾತನ್ನು ರಾಜನಿಗೆ ಹೇಳುತ್ತಾ ವೀರರಾಜಯ್ಯ ಅರ್ಚಕರ ಸಹಾಯದಿಂದ ನೀಡಿದ ವಿಷದ ತೀರ್ಥ ನೀಡಿದ ಸಂದರ್ಭದಲ್ಲಿ ಮೇಲಿನ ಮಾತನ್ನು ಹೇಳಿದರು. ಅದಾಗಲೇ ಮೊದಲನೇ ಮಗನನ್ನು ಕಳೆದುಕೊಂಡ ದುಃಖದಲ್ಲಿದ್ದರು.

'ಜೀವಕ್ಕೆ ಜೀವ ಎಂಬ ನ್ಯಾಯಶಾಸನ ನಮ್ಮದಲ್ಲ" ರಾಜನಾಗಿ ಜನರ ಹಿತವನ್ನು ಬಯಸುವ ರಾಜ, ಯಾರೂ ತಿಳಿಗೇಡಿಗಳು ತಿಳಿಯದೆ ಮಾಡಿದ ತಪ್ಪಿಗೆ ಜೀವವನ್ನು ತೆಗೆಯದೇ ಜೀವನಪೂರ್ತಿ ಬದುಕಿ ಅನುಭವಿಸುವಂತೆ ಮಾಡಬೇಕು ಎಂಬ ಅರ್ಥದಲ್ಲಿ ಮೇಲಿನ ಮಾತು ಬಳಕೆಯಾಗಿದೆ. ಈ ಮಾತಿನಿಂದಲ್ಲೇ ಕೊಲ್ಲಲು ಬಂದವರ ತಲೆಕಾಯ್ದು ಕಳಿಸಿದ ನಾಡಿನ ರಾಜರಾದರು ರಾಜ ಒಡೆಯರ್.

"ಶತ್ರುವಿನ ಶತ್ರು ನಮ್ಮ ಮಿತ್ರ" ಎಂಬ ಮಾತನ್ನು ಅಜ್ಜಯ್ಯ ಹೇಳುತ್ತಾನೆ. ಪಾಳೇಗಾರ ಒಕ್ಕೂಟವನ್ನು ಸೇರಿಬಿಡುವುದು. ಇಲ್ಲಿ ತಟಸ್ಥರಾಗಿ ಶ್ರೀರಂಗಪಟ್ಟಣದ ಮೇಲೆ

ಆಗುವ ಆಕ್ರಮಣವನ್ನು ನೋಡಿ ಇದ್ದು ಬಿಡಬೇಕು. ಇದು ಒಳ್ಳೆಯತನ ಅಲ್ಲ ಎಂದು ತಿಳಿಸಿದರು.

"ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರ" ಅಸಹಾಯಕರಾದ ಶ್ರೀರಂಗರ ಮೇಲೆ ಯುದ್ಧಮಾಡುವುದು ಧರ್ಮವಲ್ಲ ಎಂಬುದನ್ನು ಮೇಲಿನ ಮಾತಿನ ಮೂಲಕ ರಾಣಿ ರಾಜ ಒಡೆಯರ್ ತಿಳಿಸಿದರು.

"ರಾಜ ಕೌಶಲಗಳನ್ನು, ಶತ್ರುಗಳನ್ನು ಬಗ್ಗುಬಡಿಯುವ ರಾಜಕಾರಣದ ಪಟ್ಟುಗಳನ್ನು ಕಲಿಸಿಕೊಡಿರಿ" ಖಾಲಿಯಾದ ಖಜಾನೆಗಳನ್ನು ನೀಡಿ ಪ್ರಜೆಗಳ ಸರ್ವಬಯಕೆಗಳನ್ನು ಈಡೇರಿಸಿ ಎಂದು ಹೇಳಲುಯಾರಿಗೂ ಸಾಧ್ಯವಿಲ್ಲ. ಅದನ್ನುಬಯಸದೇ ಬಂದ ಮಹಾಭಾಗ್ಯವೆಂದು ಅಪ್ಪಿಕೊಳ್ಳಲು, ಒಪ್ಪಿಕೊಳ್ಳಲು ಪೆದ್ದರೂ ಸಹ ಮುಂದೆ ಬರುವುದಿಲ್ಲ" "ಏನೂ ಆಗುವುದಿಲ್ಲ – ಸುಮ್ಮನೆ ಕೂತುಗೋಲ್ಲಿ ಅಪ್ಪಯ್ಯ. ರಾಜ ಒಡೆಯರ್ ಕುಮ್ಮಕ್ಕಿಲ್ಲದೇ ಭಟನಾಯಕ ಇಷ್ಟೆಲ್ಲವನ್ನು ಮಾಡಿದ ಅಂತ ಅನ್ಕೊಂಡಿದ್ದೀರಾ. "ಇನ್ನೂ ಏಕೆ ಮೀನ ಮೇಷ ಎಣಿಸುತ್ತಿದ್ದಿಯಾ? ಕೊಟ್ಟ ಲಂಚ ಸಾಲದೆನ್ನಿಸಿತೆ?" "ಬಾಯಿ ಮುಚ್ಕೊ.... ಸಾಕು", "ಮೈಸೂರರರಸರಿಗೆ ಎಲ್ಲವೂ ಬೇಕು ರಾಜ್ಯ ... ಸಿಂಹಾಸನ ವಸ್ತು, ಕೋಶ... ಕೊನೆಗೆ ಇದೂ ಬೇಕು. ಇಲ್ಲ ಇದನ್ನು ನಾನು ಕೊಡುವುದಿಲ್ಲ ಇತ್ಯಾದಿ ಖಡಕ್ ಸಂಭಾಷಣೆಗಳು ಕಾದಂಬರಿಯ ಉದ್ದಕ್ಕೂ ಕಾಣಬಹುದಾಗಿದೆ. ನಾಡಿನ ಆಳರಸರ ಕತೆ ನಮ್ಮ ಮನೆಗಳಲ್ಲಿಯೇ ನಡೆದ ಕಥೆ ಎನಿಸುವಷ್ಟು ಆಪ್ತತೆಯ ಭಾವನೀಡುತ್ತವೆ. ಗಾದೆಗಳನ್ನು ನುಡಿಗಟ್ಟುನ್ನು ಆಡುಮಾತುಗಳನ್ನು ಬಹಳ ಚೆನ್ನಾಗಿ ಕಾದಂಬರಿಯಲ್ಲಿ ದುಡಿಸಿಕೊಂಡಿರುವ ಲೇಖಕಿಯ ಬರವಣಿಗೆ ಸರ್ವಸಾಮಾನ್ಯನಿಗೂ ಅರ್ಥವಾಗುವಂತಿದೆ. ಈ ರೀತಿಯ ಗಾದೆಗಳ ಬಳಕೆಯಿಂದಾಗಿ ಕಾದಂಬರಿಯೂ ವಿಜೃಂಭಿಸಿದೆ.

# ಉಪಸಂಹಾರ

ಕನ್ನಡ ಸಾಹಿತ್ಯದ ಸೃಜನಶೀಲ ಬರಹಗಾರ್ತಿಯರಲ್ಲೊಬ್ಬರು ಡಾ. ಎಂ.ಎಸ್.ವೇದಾ ಅವರು. ಅವರ ಸಾಹಿತ್ಯ ಬತ್ತಳಿಕೆಯಿಂದ ನಾಲ್ಕು ಕಾದಂಬರಿಗಳು ಮೂಡಿಬಂದಿದೆ. ಈ ಕಾದಂಬರಿಗಳು ತನ್ನ ಒಡಲಲ್ಲಿ ವರ್ತಮಾನದ ಬದುಕಿನ ಹಲವು ಮುಖಗಳನ್ನು ಅನಾವರಣಗೊಳಿಸುತ್ತಾ ಹೋಗುತ್ತವೆ. ಆ ಮೂಲಕ ಸರ್ವಕಾಲಿಕ ಸತ್ಯವೊಂದನ್ನು ಸಾರಿರುವ ಅಪರೂಪದ ಶಕ್ತಿಯಾಗಿ ಹೊರಹೊಮ್ಮಿದೆ. ಇವರ ಕಾದಂಬರಿಗಳು ಸ್ತ್ರೀವಾದಿ ನೆಲೆಯಲ್ಲಿ ರೂಪುಗೊಂಡಿದ್ದು, ಹೆಣ್ಣಿನ ಒಳಜಗತ್ತಿನ ತಳಮಳಗಳನ್ನು ಚಿತ್ರಿಸುವುದರ ಜೊತೆಗೆ ಹೆಣ್ಣು ಯಾವ ರೀತಿ ಗಟ್ಟಿತನವನ್ನು ರೂಪಿಸಿಕೊಂಡು ಜೀವನ ಸಾಗಿಸಬೇಕೆಂಬುದನ್ನು ತೋರಿಸುತ್ತದೆ.

ಜಮೀನು ಕಾದಂಬರಿಯಲ್ಲಿ ದೇವಮ್ಮ ಒಬ್ಬ ಪಕ್ಕಾ ಹಳ್ಳಿಯ ರೈತನ ಮಗಳಾಗಿ ಒಂದು ಜಮೀನನ್ನು ಹೇಗೆ ನಡೆಸಬಹುದು ಎಂಬುದನ್ನು ಬಹಳ ಚೆನ್ನಾಗಿ ಕಾದಂಬರಿಯಲ್ಲಿ ತೋರಿಸಿದ್ದಾರೆ. ಊರಿನವರ ದ್ವೇಷವನ್ನು ಕಟ್ಟಿಕೊಂಡು ಪಕ್ಕದ ಜಮೀನಿನವರ ಹಗೆತನವನ್ನು....... ಆಳುಗಳ ವಂಚನೆಯನ್ನು ಸಹಿಸಿಕೊಂಡು ಜಮೀನನ್ನು ಉಳಿಸಿಕೊಳ್ಳಬೇಕೆಂದು ಹೋರಾಡುವ ಪರಿಯನ್ನು ನೋಡುತ್ತಿದ್ದಾರೆ. ಇಂದಿನ ದಿನಗಳಲ್ಲಿಯೂ ಕೂಡ ಹಳ್ಳಿಯಲ್ಲಿ ಇದೇ ರೀತಿಯ ಗಟ್ಟಿತನದಿಂದ ಜಮೀನು ಮಾಡುತ್ತಿರುವ ಹಳ್ಳಿಯ ಹೆಣ್ಣು ಮಕ್ಕಳು ಕಣ್ಣಮುಂದೆ ಬರುತ್ತಾರೆ. ಅವರ ನೋವು–ನಲಿವು, ಕಷ್ಟ–ನಷ್ಟ ಏನೇ ಇದ್ದರೂ ಎಲ್ಲವನ್ನು ಧೈರ್ಯವಾಗಿ ಎದುರಿಸುವ ಸ್ತ್ರೀಯರ ಪ್ರತಿಬಿಂಬವಾಗಿ ದೇವಮ್ಮನವರು ಜಮೀನು ಕಾದಂಬರಿಯಲ್ಲಿ ಕಾಣಿಸಿಕೊಳ್ಳುತ್ತಾರೆ.

ಇವರ ಎರಡನೆಯ ಕಾದಂಬರಿಯಾದ ಜಯ ಕಾದಂಬರಿಯೂ ಪೌರಾಣಿಕ ಕಾದಂಬರಿಯಾಗಿದ್ದು, ಮಹಾಭಾರತ ಪುರಾಣಗಳ ರತ್ನಗರ್ಭದಲ್ಲಿ ಹುಟ್ಟಿದ ಕಾದಂಬರಿಗಳಲ್ಲಿ ಜಯ ಕಾದಂಬರಿಯೂ ಒಂದು. ಜಯ ಕಾದಂಬರಿಯೂ ಸ್ತ್ರೀವಾದಿ ನೆಲೆಯಲ್ಲಿ ರಚನೆಯಾಗಿದ್ದು, ಮಹಾಭಾರತದಲ್ಲಿ ತಿರಸ್ಕಾರಕ್ಕೆ ಒಳಗಾಗಿದ್ದ ಸ್ತ್ರೀಯರನ್ನು ಅವರ ಪಾತ್ರಗಳನ್ನು ಕುಲ ಧರ್ಮಕ್ಕನುಗುಣವಾಗಿ ಬದಲಾವಣೆಗೊಳಪಡಿಸಿದ್ದಾರೆ. ಲೋಕದ ದೃಷ್ಟಿಯಲ್ಲಿ ಪತಿವ್ರತೆ ಎನಿಸಿಕೊಂಡ ಗಾಂಧಾರಿ ತನ್ನ ಅಂಧಪತಿಯನ್ನು ನೋಡಲು ಸಾಧ್ಯವಿಲ್ಲವೆಂದು ತನಗೆ ಕುರುಡನಾದ ಗಂಡ ಸಿಕ್ಕಿದಕ್ಕೆ ನೊಂದು ಬಟ್ಟೆಯಿಂದ ಕಣ್ಣನ್ನು ಮುಚ್ಚಿಕೊಳ್ಳುತ್ತಾಳೆ ಎಂಬುದು ಆಧುನಿಕ ದೃಷ್ಟಿಯಲ್ಲಿ ಗಾಂಧಾರಿಯನ್ನೂ ಲೇಖಕಿ ನೋಡಿದ ರೀತಿಯಾಗಿದೆ. ಸಮಾಜವು ಗಾಂಧಾರಿಯಂತಹ ಪತಿಭಕ್ತಿಯುಳ್ಳ ಹೆಂಡತಿಯನ್ನು

ಹೊಗಳಿದರೇ ಹೊರತು ಅವರ ಅಂತರಾತ್ಮವನ್ನು ನೋಡಲು ಹೋಗಲಿಲ್ಲ. ಲೇಖಕಿ ಆ ಕೆಲಸವನ್ನು ಜಯ ಕಾದಂಬರಿಯಲ್ಲಿ ತೋರಿಸಿದ್ದಾರೆ.

ಕುಂತಿಯು ರಾಜಮಾತೆಯಾಗಿದ್ದು, ಎಲ್ಲರ ಸರಿ-ತಪ್ಪುಗಳನ್ನು ತಿಳಿಸುವವಳು ಆಗಿದ್ದರೂ ಸಮಾಜಕ್ಕೆ ಹೆದರಿ ತಾನು ಮಾಡಿದ ತಪ್ಪನ್ನು ಮುಚ್ಚಿಹಾಕಲು ಕಣ್ಣ ಮುಂದೆ ಮಗನಿದ್ದರೂ ಅವರು ದುರಾಚಾರಗಳನ್ನು ಮಾಡುತ್ತಿದ್ದರು ಕೇಳುವಂತಹ ಧೈರ್ಯ ಮಾಡಲಿಲ್ಲ. ಆದರೂ ಕರ್ಣನ ಅಂತ್ಯ ಸಂಸ್ಕಾರದ ಸಂದರ್ಭದಲ್ಲಿ ತನ್ನ ಒಡಲ ದುಃಖವನ್ನು ತಡೆಯಲಾರದೆ ತನ್ನ ಮಕ್ಕಳು ಪಾಂಡವರ ಮುಂದೆ ಹೇಳಿ ಧರ್ಮರಾಯನ ನಿಂದನೆಗೆ ಒಳಗಾಗುತ್ತಾಳೆ.

ಮಹಾಭಾರತದಲ್ಲಿ ಇಲ್ಲದೆ ಇರುವಂತಹ ಪಾತ್ರಗಳನ್ನು ಸೃಷ್ಟಿಸಿರುವುದು ಲೇಖಕಿಯ ಸ್ವಂತ ಸೃಷ್ಟಿಯ ಕೌಶಲವನ್ನು ಪ್ರತಿಬಿಂಬಿಸುತ್ತದೆ. ಅಭಿಲಾಷಾ, ರೋಹಿಣಿ, ಕಾಳಶಂಭು, ಚಂದ್ರಸೇನ, ಶಿಬಿರದ ವೈದ್ಯ ಮುಂತಾದ ಪಾತ್ರಗಳು ಸೃಷ್ಟಿಯಾಗಿದ್ದು, ಕಾದಂಬರಿಗೆ ಪೂರಕವಾಗಿ ಸಹಾಯ ಮಾಡುತ್ತದೆ. ಅಭಿಲಾಷಾದೇವಿ ಕಾದಂಬರಿಯ ಪ್ರಾರಂಭದಲ್ಲಿಯೇ ಯುದ್ಧದ ಭೀಕರತೆ ನೆನೆದು ಯುದ್ಧ ಬೇಡ ಎಂದು ತನ್ನ ಗಂಡನಿಗೆ ಹೇಳುತ್ತಾಳೆ. ಆದರೆ ಅದನ್ನು ಕೇಳದೆ ಯುದ್ಧಕ್ಕೆ ಬಂದು ಪ್ರಾಣಬಿಡುತ್ತಾನೆ. ರೋಹಿಣಿ ಯುದ್ಧದಲ್ಲಿ ತನ್ನ ಗಂಡ ಕಳೆದುಕೊಂಡ ಕಾಲನ್ನು ಸರಿಪಡಿಸಿ ಉಳಿಸಿಕೊಳ್ಳಲು ಶತಾಯಗತಾಯ ಹೋರಾಟ ಮಾಡಿದರೂ ವ್ಯರ್ಥವಾಗಿ ಮಾರ್ಗ ಮಧ್ಯೆದಲ್ಲಿ ಗಂಡ ಸಾಯುವುದು. ಕಾಳಶಂಭು ತನ್ನ ಮಗಳು, ಹೆಂಡತಿಯನ್ನು ನೋಡಲು ಆತುರ ಪಡುತ್ತಿದ್ದುದು ಇವೆಲ್ಲವೂ ಅವರ ಪರಿಸ್ಥಿತಿಗಳಾಗಿದ್ದು, ಯುದ್ಧ ವಿರೋಧಿ ನಿಲುವನ್ನು ಲೇಖಕಿ ಮೇಲಿನ ಪಾತ್ರಗಳ ಮೂಲಕ ಹೇಳಹೊರಟಿದ್ದಾರೆ.

ಪ್ರತಿ ಸ್ತ್ರೀಯರಲೊಬ್ಬ ಪುರುಷ ಪ್ರತಿ ಪುರುಷನೊಳಗೊಬ್ಬ ಸ್ತ್ರೀ ಜೀವಂತವಾಗಿರುತ್ತಾರೆನ್ನುವ ಹೊಸ ತತ್ವವೊಂದನ್ನು ದ್ರೌಪದಿ, ಭಾನುಮತಿ, ಗಾಂಧಾರಿ, ಕುಂತಿ, ಕರ್ಣ, ಉತ್ತರ ಮುಂತಾದ ಪಾತ್ರಗಳ ಮೂಲಕ ಅನಾವರಣಗೊಳಿಸಿದ್ದಾರೆ.

ವೇದಾ ಅವರ ಕಪ್ಪು ಕಿವಿಯ ಬಿಳಿಯ ಕುದುರೆಗಳು ಕಾದಂಬರಿಯೂ ಇವರ ಸಾಹಿತ್ಯ ರಚನೆಯಲ್ಲಿ ಮೂಡಿ ಬಂದು ರತ್ನದಂತೆ ಅಗ್ರಸ್ಥಾನದಲ್ಲಿ ನಿಲ್ಲುತ್ತದೆ. ಮಾಧವಿ ಮತ್ತು ಆಕೆಯ ಸುತ್ತ ನಡೆಯುವ ಕತೆಯನ್ನು ವರ್ತಮಾನದ ಒಡಲಲ್ಲಿಟ್ಟು ಅನೇಕ ಒಳವಿವರಗಳನ್ನು ನಿಡಿದ್ದಾರೆ. ಆಧುನಿಕ ಸ್ತ್ರೀವಾದಿ ಪ್ರಜ್ಞೆಯ ಅಂಶಗಳಾದ ಸೋದರಿತ್ವ, ಮಾತೃತ್ವದ ಮಹತ್ವವನ್ನು ಹೇಳಿದ್ದಾರೆ. ಪುರುಷ ಪ್ರಧಾನವಾದ ಕುಟುಂಬವಿದ್ದರೂ ಗಂಡುಮಕ್ಕಳಿಗೆ ವಿಶೇಷವಾದ ಪ್ರಾಮುಖ್ಯತೆ ಇದ್ದರೂ ಇಲ್ಲಿ ಪುರು ಕೂಡಾ ತಂದೆಯ ದೌರ್ಜನ್ಯಕ್ಕೆ ಒಳಗಾಗಿ

ಅಕಾಲ ವೃದ್ಧಾಪ್ಯವನ್ನು ಅನುಭವಿಸುತ್ತಿದ್ದನು. ಪುರುಷ ರಾಜಕಾರಣವು ಸ್ತ್ರೀ ಪುರುಷರೆಂಬ ಭೇದವಿಲ್ಲದೇ ತಮ್ಮ ದೌರ್ಜನ್ಯವೆಸಗುತ್ತಿರುವುದನ್ನು ಮಾಧವಿ ಮತ್ತು ಪುರುವಿನ ಮೂಲಕ ಚಿತ್ರಿಸಿದ್ದಾರೆ.

ಯಯಾತಿ ಯಾರೂ ನೀಡದಂತಹ ದಾನವನ್ನು ನೀಡಿ ಖ್ಯಾತಿ ಪಡೆಯಬೇಕೆಂದು ಬಯಸಿ ಕುಖ್ಯಾತಿಗೆ ಗುರಿಯಾಗುತ್ತಾನೆ. ಯಯಾತಿ, ಗಾಲವ, ವಿಶ್ವಾಮಿತ್ರ, ಹರ್ಯಶ್ವ ದಿವೋದಾಸ, ಉಶೀರ, ಶರಭಯ್ಯ ಈ ಪಾತ್ರಗಳು ಸ್ವಾರ್ಥಿಗಳಾಗಿ ಸಮಯ ಸಾಧಕರಾಗಿ ಸ್ವೇಚ್ಛೆಯಿಂದ ಹೆಣ್ಣನ್ನು ಬಳಸಿಕೊಂಡವರಾಗಿ ಕಂಡುಬರುತ್ತಾರೆ. ಪಿತೃವಾಕ್ಯ ಪರಿಪಾಲಕಿಯಾಗಿ ಕಂಡುಬರುವ ಮಾಧವಿ ಬಾಡಿಗೆ ತಾಯಿಯಾಗಿ ಕಂಡುಬರುವ ಮೂಲಕ ಬಾಡಿಗೆ ತಾಯಿಗೂ ಮತ್ತು ಬೆಲೆವೆಣ್ಣಿಗೂ ನಡುವೆ ಇರುವ ಸ್ಪಷ್ಟ ಚಿತ್ರಣವನ್ನು ನೀಡಿದ್ದಾರೆ. ಮಾಧವಿ ಪ್ರಭುತ್ವದ ಅಧಿಕಾರಕ್ಕೆ ಒಳಪಟ್ಟು ನಾಲ್ಕೂ ಜನರ ಬಾಯಿಗೆ ಆಹಾರವಾಗಿದ್ದವಳೆಂದು ಗೊತ್ತಾದರೂ ಆದಿಮನಿಗೆ ಆಕೆಯ ಮೇಲಿದ್ದ ಪ್ರೀತಿ ಸ್ವಲ್ಪವೂ ಕಡಿಮೆಯಾಗಿರಲಿಲ್ಲ. ಬದಲಾಗಿ ಇನ್ನಷ್ಟು ಪ್ರೀತಿ ಹೆಚ್ಚಾಗಿತ್ತು. ಇತರ ಗಂಡಸರ ನಡವಳಿಕೆಯಿಂದ ಹೇವರಿಗೆ ಮೂಡಿದ್ದರೂ ಆ ಗುಂಪಿಗೆ ತನ್ನ ಹುಡುಗನನ್ನು ಸೇರಿಸದೆ ಪ್ರೀತಿಯ ಹುಡುಗನಾಗಿಯೇ ನೋಡಿದ್ದಳು. ಇವೆಲ್ಲಾ ಗಂಡು–ಹೆಣ್ಣಿನ ಸಂಬಂಧಗಳ ವಿವಿಧ ರೂಪದ ದರ್ಶನವಾಗುತ್ತದೆ. ಮಾಧವಿ ಆಧುನಿಕ ಮನಸ್ಸುಗಳ ಪ್ರತಿಬಿಂಬವಾಗಿ ಆಧುನಿಕ ಚಿಂತನೆಗಳಲ್ಲಿ ಉಸಿರಾಡುತ್ತಿದ್ದಾಳೆ.

ವೇದಾ ಅವರ ನಾಲ್ಕನೆಯ ಕಾದಂಬರಿಯಾದ ರಾಜ ಒಡೆಯರ್ ಕಾದಂಬರಿಯಲ್ಲಿ ಸ್ತ್ರೀವಾದಿ ಹಿನ್ನಲೆಯಲ್ಲಿ ಗುರುತಿಸುವಂತಹ ಸ್ತ್ರೀಪಾತ್ರಗಳು ಬಾರದೆ ಹೋದರೂ ಅರಮನೆಯ ಒಳಗೆ ಸ್ತ್ರೀ ಚಟುವಟಿಕೆಗಳು ನಡೆಯುತ್ತಿದ್ದವು. ಅದರ ಪರಿಣಾಮ ಅರಮನೆಯಿಂದ ಆಚೆಗೂ ಹರಿಯುತ್ತಿತ್ತು. ವೀರಾಜಮ್ಮಣ್ಣಿಯೂ ರಾಜ ಒಡೆಯರಿಗೆ ನೀಡುತ್ತಿದ್ದ ಸಲಹೆಗಳು ರಾಜನಿಗೂ ಇಷ್ಟವಾಗಿ ಜನತೆ ಸಂತೋಷಕ್ಕೂ ಕಾರಣವಾಗಿತ್ತು. ಕೆಲವೊಮ್ಮೆ ತಪ್ಪುಗಳಿಗೂ ಕಾರಣವಾಗುತ್ತಿತ್ತು. ಅರಮನೆಯ ಒಳಗೆ ಕುದಿಯುತ್ತಿದ್ದ ಅಲಮೇಲಮ್ಮ ರಾಜನ ಎದುರು, ರಾಜಸಭೆಯ ಎದುರು ಹಾರ ಹಾಕಲಾರದೆ ಬೆಂದಿದ್ದಳು. ಆದರೆ ಕೊನೆಯಲ್ಲಿ ತನ್ನ ಕೋಪವನ್ನು ಕಾವೇರಿ ನದಿಯಲ್ಲಿ ನಿಂತು ಹಾರಹಾಕಿದ್ದಳು. ಈ ಕಾದಂಬರಿಯಲ್ಲಿ ಮುಖ್ಯ ಪಾತ್ರಗಳಾಗಿ ಸ್ತ್ರೀ ಬರುವುದು ಕಡಿಮೆಯಾದರೂ ಕೂಡ ಅವರ ನಿಲುವು, ನಿರ್ಧಾರಗಳು ಸ್ತ್ರೀವಾದಿಯ ನೆಲೆಯಲ್ಲಿಯೇ ಮೂಡಿರುವುದು ವಿಶೇಷ.

ವೇದಾ ಅವರ ನಾಲ್ಕು ಕಾದಂಬರಿಗಳನ್ನು ಅಭ್ಯಸಿಸಿದಾಗ ಅವರು ಸ್ತ್ರೀವಾದಿ ನೆಲೆಯಲ್ಲಿ ಚಿತ್ರಿಸಿರುವುದು ದಟ್ಟವಾಗಿ ಕಾಣುತ್ತದೆ. ಅದರಿಂದಲೇ ಎಲ್ಲಾ ಕಾದಂಬರಿಗಳಲ್ಲಿ ಬರುವಂತಹ ಸ್ತ್ರೀಪಾತ್ರಗಳು ವಿಭಿನ್ನ ಸನ್ನಿವೇಶದಲ್ಲಿ ಮೂಡಿ ಬರುವಂತಹವು ಆಗಿವೆ.

ಆದರೂ ಎಲ್ಲಾ ಪಾತ್ರಗಳು ಸ್ತ್ರೀ ಶೋಷಣೆಯ ವಿವಿಧ ಮಗ್ಗಲುಗಳನ್ನು ಬಿಂಬಿಸುತ್ತವೆ. ಸ್ತ್ರೀಪಾತ್ರಗಳು ಎಂತಹ ಕಷ್ಟಗಳು ಬಂದರೂ ಅದಕ್ಕೆ ಬೆನ್ನು ಮಾಡಿ ನಿಲ್ಲದೆ ಕಷ್ಟ, ಸಹಿಷ್ಣುತೆಗಳು, ಅಡ್ಡಿ ಆತಂಕಗಳು ಎದುರಾದಾಗ ಹೆದರದೇ ಧೈರ್ಯದಿಂದ ಎದುರಿಸುವಂಥವುಗಳಾಗಿ ಮೂಡಿ ಬಂದಿವೆ.

ಇವರ ಕಾದಂಬರಿಗಳು ಭಿನ್ನ ಭಿನ್ನ ಪರಿಸರದಿಂದ ರಚಿತವಾಗಿರುವುದರಿಂದ ತಿರುವನ್ನು ನೀಡುವಂತಹ ಸಂದರ್ಭಗಳು ಸನ್ನಿವೇಶಗಳನ್ನು ಲೇಖಕಿ ಮನೋಜ್ಞವಾಗಿ ಚಿತ್ರಿಸಿದ್ದಾರೆ. ಆದರೆ ಕಾದಂಬರಿಯನ್ನು ಇತರ ನೆಲೆಗಳಿಂದ ಸ್ತ್ರೀವಾದ, ಸಾಮಾಜಿಕತೆ ಇತ್ಯಾದಿ ದೃಷ್ಟಿಯಿಂದಲೂ ಬಹಳ ಜಾಗರೂಕವಾಗಿ ಸನ್ನಿವೇಶ ನಿರ್ಮಿಸಿದ್ದಾರೆ. ಜಮೀನು ಕಾದಂಬರಿಯಲ್ಲಿ ಕಾಲುವೆಯನ್ನು ತಂದು ಅಪಾಯ ತಂದುಕೊಳ್ಳುವ, ಜಯ ಕಾದಂಬರಿಯಲ್ಲಿ ಕರ್ಣನ ಸಂಸ್ಕಾರದ ಸಂದರ್ಭದಲ್ಲಿ ಕುಂತಿ ತನ್ನ ಮಕ್ಕಳೆದುರು ನಿಜವನ್ನು ಹೇಳುವ ಸನ್ನಿವೇಶ, ಕಪ್ಪು ಕಿವಿಯ ಬಿಳಿಯ ಕುದುರೆಗಳು ಕಾದಂಬರಿಯಲ್ಲಿ ಹೆಣ್ಣನ್ನು ದಾನ ಮಾಡುವ ಸನ್ನಿವೇಶ, ರಾಜಒಡೆಯರ್ ಕಾದಂಬರಿಯಲ್ಲಿ ಶ್ರೀರಂಗಪಟ್ಟಣದ ದಾನ, ಅಲಮೇಲಮ್ಮನ ಶಾಪ ಮುಂತಾದ ಸನ್ನಿವೇಶಗಳು ಲೇಖಕಿ ತನ್ನ ಸ್ವಂತಿಕೆಯಿಂದ ನಿರ್ಮಿಸಿದ ಸನ್ನಿವೇಶವಾಗಿದ್ದು ಅವರ ಪ್ರತಿಭೆಯನ್ನು ಹೊರಹಾಕುತ್ತವೆ. ಇಂತಹ ಹಲವಾರು ಸನ್ನಿವೇಶಗಳು ಇಂದಿಗೂ ನಮ್ಮ ಸಮಾಜದಲ್ಲಿ ನಡೆಯುತ್ತಿರುವಂತಹವುಗಳಾಗಿವೆ. ಇವುಗಳನ್ನು ತಮ್ಮ ಕಾದಂಬರಿಗೆ ಮುಕ್ತ ರೀತಿಯಲ್ಲಿ ಲೇಖಕಿ ಬಳಸಿದ್ದಾರೆ.

ಇನ್ನು ಪಾತ್ರಶೋಷಣೆಯ ವಿಷಯ ಬಂದಾಗ ಒಟ್ಟು ಕಾದಂಬರಿಯ ಪಾತ್ರಗಳನ್ನು ಅಧ್ಯಯನ ದೃಷ್ಟಿಯಿಂದ ಪ್ರಧಾನ ಪಾತ್ರಗಳು ಮತ್ತು ಪೂರಕಪಾತ್ರಗಳು ಎಂದು ವಿಭಾಗಿಸಿಕೊಂಡಿದ್ದೇನೆ. ಪ್ರಧಾನ ಪಾತ್ರಗಳಾಗಿ ದೇವಮ್ಮ, ಜಮೀನು ಕಾದಂಬರಿಯಲ್ಲಿ ಕಾಣಿಸಿಕೊಂಡು ತನ್ನ ಗಟ್ಟಿ ನಿರ್ಧಾರದಿಂದ ತನ್ನ ಗಂಡನಿಗೆ ಸಹಾಯಕಳಾಗಿ ನಿಲ್ಲುತ್ತಾಳೆ. ಜಯ ಕಾದಂಬರಿಯಲ್ಲಿ ದ್ರೌಪದಿ, ಕುಂತಿ, ಗಾಂಧಾರಿ, ಭಾನುಮತಿ ಮುಂತಾದ ಪಾತ್ರಗಳ ಮೂಲಕ ನಿಜವಾದ ಸ್ತ್ರೀ ಆಶೋತ್ತರಗಳನ್ನು ಹೊರಹಾಕಿದ್ದಾರೆ. ದ್ರೌಪದಿ ಕಾದಂಬರಿಯ ಉದ್ದಕ್ಕೂ ಯುದ್ದ ಬೇಕೋ? ಬೇಡವೋ? ಎಂಬ ದ್ವಂದ್ವದಲ್ಲೇ ಮುಳುಗಿದರೆ, ಗಾಂಧಾರಿ ತನಗೆ ಕುರುಡು ಗಂಡನನ್ನು ಮದುವೆ ಮಾಡಿಸಿದ್ದಕ್ಕಾಗಿ ಕಣ್ಣಿಗೆ ಬಟ್ಟೆ ಕಟ್ಟಿಕೊಳ್ಳುವುದು, ಭಾನುಮತಿ ತನ್ನ ಗಂಡ ನನ್ನ ಸರಿಯಾದ ದಾರಿಗೆ ತರಲು ಪ್ರಯತ್ನಿಸಿ ಸೋತು ಹೋಗಿದ್ದು, ಲೇಖಕಿಯ ಪಾತ್ರ ಶೋಷಣೆ ಸಾಮರ್ಥ್ಯವನ್ನು ತಿಳಿಸುತ್ತದೆ. ಕಪ್ಪು ಕಿವಿಯ ಬಿಳಿಯ ಕುದುರೆಗಳು ಕಾದಂಬರಿಯಲ್ಲಿ ಮಾಧವಿಯ ಹುಟ್ಟಿನ ಬಗೆಗೆ ತಿಳಿಸಲು ಲಕ್ಷ್ಮಿಯ ಪಾತ್ರ ಸೃಷ್ಟಿ ಅಮೋಘವಾಗಿದೆ. ಅಲ್ಲದೆ ಹೆಣ್ಣಿನ ಕಷ್ಟ ಹೆಣ್ಣಿಗೆ ಅರ್ಥವಾಗುತ್ತದೆ ಎಂಬಂತೆ ದೇವಯಾನಿ,

ಶರ್ಮಿಷ್ಠೆ ತಮ್ಮ ದ್ವೇಷ ಮರೆತು ಮಾಧವಿಯನ್ನು ರಕ್ಷಿಸಲು ಹೆಣಗುವುದು. ರಾಜಒಡೆಯರ್ ಕಾದಂಬರಿಯಲ್ಲಿ ಯಾವುದೇ ರೀತಿಯ ಹೊಸ ಬದಲಾವಣೆಯನ್ನು ಕಾಣದೆಹೋದರೂ ರಾಜ ಒಡೆಯರ್ ತನ್ನ ಹೆಂಡತಿಯ ಸಲಹೆ ಪಡೆಯುವುದನ್ನು ಸ್ತ್ರೀವಾದಿ ನೆಲೆಯಲ್ಲಿ ಚಿತ್ರಿಸಿದ್ದಾರೆ.

ಪೂರಕ ಪಾತ್ರಗಳಾಗಿ ಮೂಡಿಬಂದಿರುವ ಪಾತ್ರಗಳೆಂದರೆ ಜಮೀನು ಕಾದಂಬರಿಯಲ್ಲಿ ಗಂಗವ್ವ, ಅಂದಾನಪ್ಪ ಮನಸ್ಸಿನಲ್ಲಿ ಉಳಿಯುವ ಪಾತ್ರಗಳಾಗಿವೆ. ಜಯ ಕಾದಂಬರಿಯಲ್ಲಿ ಲೇಖಕಿ ಮಹಾಭಾರತದಲ್ಲಿ ಇಲ್ಲದ ಹೊಸ ಪಾತ್ರಗಳಾದ ಅಭಿಲಾಷಾದೇವಿ, ರೋಹಿಣಿ, ಕಾಳಶಂಭು ಪಾತ್ರಗಳನ್ನು ಸ್ವಂತಿಕೆಯಿಂದ ಚಿತ್ರಿಸಿ ಆ ಪಾತ್ರಗಳ ಮೂಲಕ ಯುದ್ಧ ವಿರೋಧಿ ನೀತಿಯನ್ನು ಸಾರುತ್ತಿದ್ದಾರೆ. ಮೂರನೆ ಕಾದಂಬರಿಯಾದ ಕಪ್ಪು ಕಿವಿಯ ಬಿಳಿಯ ಕುದುರೆಗಳು ಕಾದಂಬರಿಯಲ್ಲಿ ಬರುವ ಆದಿಮ, ದಿವೋದಾಸ, ಗಾಲವ, ದಾಸಿಸೇವಂತಿ ಇತರ ಪಾತ್ರಗಳ ಮೂಲಕ ಎಲ್ಲಾ ಗಂಡಸರು ಕೆಟ್ಟವರಲ್ಲ ಅವರಲ್ಲೂ ಒಳ್ಳೆಯ ಗುಣಗಳು ಇರುತ್ತವೆ. ಹಾಗೆಯೇ ಎಲ್ಲಾ ಹೆಂಗಸರು ಒಳ್ಳೆಯರಲ್ಲ ಮಾತೃಹೃದಯಿಗಳಲ್ಲ ಅವರಲ್ಲೂ ಕೆಡಕನ್ನು ಉಂಟುಮಾಡುವ ಚೇಳಿನ ಗುಣವಿರುತ್ತದೆ ಎಂಬುದನ್ನು ತೀವ್ರವಾಗಿ ತಮ್ಮ ಕಾದಂಬರಿಯಲ್ಲಿ ಮೂಡಿಸಿದ್ದಾರೆ. ರಾಜ ಒಡೆಯರ್ ಕಾದಂಬರಿಯಲ್ಲೂ ಅಜ್ಜಯ್ಯ, ಸರ್ವ ಹಿರಿಯರ ಸಭೆ ಒಬ್ಬ ರಾಜನಿಗೆ ಮಾರ್ಗದರ್ಶನ ನೀಡಿ ಅವರಿಗೆ ಆತ್ಮವಿಶ್ವಾಸ ತುಂಬುವ ಕೆಲಸ ಮಾಡುತ್ತದೆ. ಆದರೂ ಒಂದು ಹೆಣ್ಣು ಮಗಳ ಶಾಪಕ್ಕೆ ಮೈಸೂರು ಅರಸರು ತುತ್ತಾಗುವಂತಾಗುತ್ತದೆ. ಹೀಗೆ ಲೇಖಕಿ ಆಯಾ ಕಾದಂಬರಿಗಳಿಗೆ ತನ್ನ ಆಲೋಚನೆ ಅಭಿರುಚಿಗಳಿಗೆ ತಕ್ಕಂತೆ ಸ್ತ್ರೀವಾದಿ ನೆಲೆಯಲ್ಲಿ ಚಿತ್ರಿಸಿ ಆ ಮೂಲಕ ಆಧುನಿಕ ಸಮಾಜ ಮಹಿಳೆಯರಿಗೂ ಸಂಬಂಧಿಸಿದಂತಹ ಬದುಕಿನ ಅನುಭವಗಳನ್ನು ನ್ಯಾಯಯುಕ್ತವಾಗಿ ನೀಡಿದ್ದಾರೆ.

ಯಾವುದೇ ಭಾಷೆಯಾದರೂ ಅದಕ್ಕೆ ಅದರದೇ ಆದ ಕಲಾತ್ಮಕ ಗುಣವಿದೆ. ಈ ಗುಣವನ್ನು ತಮ್ಮ ಕಾದಂಬರಿಗಳನ್ನು ಸಮರ್ಥವಾಗಿ ಲೇಖಕಿ ಬಳಸಿಕೊಂಡಿದ್ದಾರೆ ಜಮೀನು ಕಾದಂಬರಿ ಗ್ರಾಮೀಣ ಭಾಷೆಯಿಂದ ಕೂಡಿದರೆ, ಉಳಿದಂತೆ ಮೂರು ಕಾದಂಬರಿಗಳು ಐತಿಹಾಸಿಕ, ಪೌರಾಣಿಕ ಕಾದಂಬರಿಯಾಗಿದ್ದು, ಆಡು ಮಾತಿನಲ್ಲಿ ಗ್ರಾಮೀಣ ಭಾಷೆಯಲ್ಲಿ ಹೇಳಲು ಸಾಧ್ಯವಾಗುವುದಿಲ್ಲ. ಆದ ಕಾರಣ ಶಿಷ್ಠ ಮಾತುಗಳಿಂದ ಕೂಡಿದ ಭಾಷೆ ಬಳಸಲಾಗಿದೆ. ಕಾದಂಬರಿಯ ಉದ್ದಕ್ಕೂ ಅಲ್ಲಲ್ಲಿ ಗಾದೆಗಳು, ನುಡಿಗಟ್ಟುಗಳ ಬಳಕೆಯನ್ನು ಕಾಣಬಹುದಾಗಿದೆ ಒಟ್ಟಾರೆ ಇವರ ನಿರೂಪಣಾ ಶೈಲಿ ಮನಮುಟ್ಟುವಂತಹ ಸಂಭಾಷಣೆಗಳು ಓದುಗರನ್ನು ಆಕರ್ಷಿಸುತ್ತದೆ.

ಒಟ್ಟು ಕಾದಂಬರಿಯನ್ನು ಅಧ್ಯಯನದ ದೃಷ್ಟಿಯಿಂದ ಐದು ಅಧ್ಯಾಯಗಳಾಗಿ ವಿಭಾಗಿಸಲಾಯಿತು. ಅಂತೆಯೇ ಮೊದಲನೆಯ ಅಧ್ಯಾಯದಲ್ಲಿ ನಿಬಂಧದ ಉದ್ದೇಶ, ಸ್ವರೂಪವನ್ನು ಬಲುಸ್ಪಷ್ಟವಾಗಿ ತಿಳಿಸಲಾಗಿದೆ.

ಯಾವುದೇ ಕಾದಂಬರಿಯನ್ನು ತಿಳಿಯುವ ಮುನ್ನ ಅದನ್ನು ಬರೆದ ಲೇಖಕರ ಬಗೆಗೆ ತಿಳಿಯುವುದು ಅಗತ್ಯವಾಗಿರುವುದರಿಂದ ಎರಡನೆಯ ಅಧ್ಯಾಯದಲ್ಲಿ ಲೇಖಕಿಯ ವೈಯಕ್ತಿ, ಪರಿಚಯ, ಅವರ ಕೃತಿಗಳು ಅವರಿಗೆ ಸಂದ ಪ್ರಶಸ್ತಿಗಳನ್ನು ಪರಿಚಯಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಕನ್ನಡ ಸಾಹಿತ್ಯದಲ್ಲಿ ಕಾದಂಬರಿಯ ಹುಟ್ಟು ಬೆಳವಣಿಗೆ ಅದರ ಮಹತ್ವವನ್ನು ತಿಳಿಸುವುದರ ಜೊತೆಗೆ ಕಾದಂಬರಿ ಕ್ಷೇತ್ರದಲ್ಲಿ ಸ್ತ್ರೀಯರ ಸಾನೆಯನ್ನು ಈ ಅಧ್ಯಾಯದಲ್ಲಿ ವಿಮರ್ಶಿಸಲಾಗಿದೆ.

ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದ ಎಂಬ ನಾಲ್ಕನೇ ಅಧ್ಯಾಯದಲ್ಲಿ ಕನ್ನಡ ಸಾಹಿತ್ಯದ ಜೊತೆಗೆ ಸ್ತ್ರೀವಾದ ಹುಟ್ಟಿ ಬೆಳೆದು ಬಂದ ರೀತಿಯನ್ನು ಸ್ತ್ರೀವಾದದ ಬಗೆಗೆ ಸ್ತ್ರೀಯರು ತೋರಿಸುತ್ತಿರುವ ಆಸಕ್ತಿಯನ್ನು ವಿಶ್ಲೇಷಿಸಲಾಗಿದೆ.

ಕೊನೆಯ ಅಧ್ಯಾಯದಲ್ಲಿ ಒಟ್ಟು ಕಾದಂಬರಿಗಳನ್ನು ನಾಲ್ಕು ವಿಭಾಗಗಳಾಗಿ ಮಾಡಿಕೊಂಡು ಎಲ್ಲಾ ಕಾದಂಬರಿಯ ವಸ್ತು ಮತ್ತು ಸ್ವರೂಪವನ್ನು ಒಂದು ಘಟ್ಟದಲ್ಲಿ ತಿಳಿಸಿದರೆ ಮತ್ತೊಂದು ಘಟ್ಟದಲ್ಲಿ ಸನ್ನಿವೇಶ ನಿರ್ವಹಣೆಯನ್ನು ಇನ್ನೊಂದು ಘಟ್ಟದಲ್ಲಿ ಪಾತ್ರಶೋಷಣೆಯನ್ನು ಕೊನೆಯದಾಗಿ ಅಭಿವ್ಯಕ್ತಿ/ಶೈಲಿಯನ್ನು ಒಂದೋಂದು ವಿಭಾಗ ಮಾಡಿಕೊಂಡು ಸಂಪೂರ್ಣ ಕಾದಂಬರಿಯನ್ನು ಅರ್ಥೈಸಲಾಗಿದೆ.

ಜಮೀನು ಮಾಡುವುದು ಎಂದ ತಕ್ಷಣ ನಮ್ಮ ಕಣ್ಣ ಮುಂದೆ ಬರುವುದು ಪುರುಷ ಮಾತ್ರ. ಆದರೆ ಜಮೀನು ಕಾದಂಬರಿಯಲ್ಲಿ ಇದಕ್ಕೆ ವ್ಯತಿರಿಕ್ತವಾಗಿ ದೇವಮ್ಮನ ಪಾತ್ರದ ಮೂಲಕ ಜಮೀನು ಮಾಡಿಸುವುದು ಅಮೋಘವಾದದ್ದು ಅದರ ಜೊತೆಗೆ ಸಮಾಜಕ್ಕೆ ಒಂದು ಬಗೆಯ ಹೊಸಪರಿ ಕಲ್ಪನೆ ಕೂಡ ಆಗಿದೆ. ಹೆಣ್ಣಿನ ಗಟ್ಟಿ ವ್ಯಕ್ತಿತ್ವದ ಪ್ರತಿಬಿಂಬಗಳಾಗಿ ಹೊಸ ದೃಷ್ಟಿಕೋನದಿಂದ ನಿರ್ಮಾಣವಾದ ಸ್ತ್ರೀಪಾತ್ರಗಳಾದ ದ್ರೌಪದಿ, ಗಾಂಧಾರ ಭಾನುಮತಿ, ಮಾಧವಿ ಪಥ್ರಗಳು ಎಂತಹ ಕಷ್ಟಬಂದರೂ ಎದೆಗುಂದದೆ ಸ್ತ್ರೀಯರಿಗೆ ದಾರಿದೀಪವಾಗಿ ಮುನ್ನಡೆಸುವ ಮಾದರಿ ಪಾತ್ರಗಳಾಗಿ ವೇದಾ ಅವರು ಚಿತ್ರಿಸಿದ್ದಾರೆ. ಆಧುನಿಕ ಪರಿಕಲ್ಪನೆಯಲ್ಲಿ ಹುಟ್ಟಿರುವಂತಹ ಬಾಡಿಗೆ ತಾಯಿ ಎಂಬ ಕಲ್ಪನೆ ಪುರಾಣ ಕಾಲದಲ್ಲೇ ಇತ್ತು ಎಂಬುದನ್ನು ಮಾಧವಿಯ ಪಾತ್ರದ ಮೂಲಕ ತೋರಿಸಿದ್ದಾರೆ. ಆದರೆ ಬಾಡಿಗೆ ತಾಯಿ ಪರಿಕಲ್ಪನೆಯಲ್ಲಿ ಎಷ್ಟು ಕ್ರೌರ್ಯ ಮತ್ತು ಸ್ವಾರ್ಥ ಇತ್ತು ಎಂಬುದನ್ನು ಲೇಖಕಿ ಸೊಗಸಾಗಿ ಚಿತ್ರಿಸಿದ್ದಾರೆ. ಅಲ್ಲದೆ ಪುರುಷ ರಾಜಕಾರಣವು ಸ್ತ್ರೀಪುರುಷರೆಂಬ ಬೇಧವಿಲ್ಲದೆ ದೌರ್ಜನ್ಯ

ಎಸಗುತ್ತಿರುವುದನ್ನು ಪುರುವಿನ ಮೂಲಕ ತಿಳಿಸಿದ್ದಾರೆ. ಹೆಣ್ಣಿನ ವ್ಯಕ್ತಿತ್ವಕ್ಕೆ ಧಕ್ಕೆ ಬಂದಾಗ ಅವಳು ನಡೆದುಕೊಳ್ಳಬಹುದಾದ ರೀತಿಗೆ ಸಮಕಾಲೀನ ಸಂದರ್ಭದಲ್ಲಿ ಅನೇಕ ಬಹುರೂಪಿಯಾದ ಉತ್ತರವನ್ನು ತಮ್ಮ ಕಾದಂಬರಿಯಲ್ಲಿ ಬೇರೆ ಬೇರೆಯಾದ ಮಾದರಿ ಪಾತ್ರಗಳ ಮೂಲಕ ತೋರಿಸಿದ್ದಾರೆ. ಇವು ಬಹಳ ವಿಶೇಷವಾದ ಅಂಶಗಳಾಗಿ ಇವರ ಕಾದಂಬರಿಯಲ್ಲಿ ಕಂಡು ಬರುವುದರ ಜೊತೆಗೆ ಹೆಣ್ಣಿನ ಮಹತ್ವವನ್ನು ಸಾರುವ ನಿಟ್ಟಿನಲ್ಲಿ ದಿಟ್ಟತನವನ್ನು ತೋರಿಸಿದ್ದಾರೆ. ಒಟ್ಟಾರೆ ಇವರ ಕಾದಂಬರಿಗಳು ಇವತ್ತಿನ ಕಾಲಧರ್ಮಕ್ಕೆ ಅನುಗುಣವಾಗಿ ಪರಿವರ್ತಿಸಿ ಅದನ್ನು ಸಮಕಾಲೀನಗೊಳಿಸಿ ಬರೆದ ಅವರ ಶ್ರಮ ಶ್ಲಾಘನೀಯವಾದದ್ದು.

# ಗ್ರಂಥಋಣ

೧. ಎಲ್.ಎಸ್. ಶೇಷಗಿರಿರಾಯರು, ಹೊಸಗನ್ನಡ ಸಾಹಿತ್ಯ ಚರಿತ್ರೆ, ಅಂಕಿತ ಪುಸ್ತಕ, ಬೆಂಗಳೂರು, ೨೦೦೭.

೨. ವಿವಿಧ ಲೇಖಕರು, ಕನ್ನಡ ಕಾದಂಬರಿ ಸಾಹಿತ್ಯ ಸಮೀಕ್ಷೆ, ಕನ್ನಡ ಸಾಹಿತ್ಯ ಸಂಘ, ಮೈಸೂರು, ೧೯೮೭.

೩. ಡಾ. ವೀಣಾಶಾಂತೇಶ್ವರ, ಇಲ್ಲಿಂದ ಮುಂದೆಲ್ಲಿಗೆ? ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪. ಡಾ. ಬಿ.ಎನ್. ಸುಮಿತ್ರಾಬಾಯಿ, ಸ್ತ್ರೀವಾದ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫. ವಿವಿಧ ಲೇಖಕರು, ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ, ಕರ್ನಾಟಕ ಸಾಹಿತ್ಯ, ಅಕಾಡೆಮಿ, ಬೆಂಗಳೂರು.

೬. ಎಚ್.ದಂಡಪ್ಪ, ಬಿ.ಎನ್.ಸುಮಿತ್ರಾಬಾಯಿ, ಸುವರ್ಣ ಸಾಹಿತ್ಯ ವಿಮರ್ಶೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೭. ಡಾ.ಶಿವಾನಂದ, ಎಸ್.ವಿರಕ್ತಮಠ, ಮಹಿಳಾ ಅಧ್ಯಯನ, ಸಂ.೭, ಪ್ರಸಾರಾಂಗ, ಹಂಪಿ, ೨೦೦೫.

೮. ಎಂ.ಎಸ್.ವೇದಾ ಅವರ ಕಾದಂಬರಿಗಳು, ಸಂವಹನ, ಮೈಸೂರು.

